5) ರೇರಾ ಕಾಯ್ದೆ ಮತ್ತು ಕಾನೂನುಗಳ ಅಡಿಯಲ್ಲಿ ನೊಂದಣಿ ಆಗಿರುವಂತಹ ಎಲ್ಲಾ ಯೋಜನೆಗಳ ಎಲ್ಲಾ ಅಗತ್ಯ ಅಂಕಿ ಅಂಶ ಮತ್ತು ವಿವರಗಳು ಪ್ರಾಧಿಕಾರದ website ನಲ್ಲಿ ಲಭ್ಯವಿದ್ದು ತಮ್ಮ ಅಧೀನ ಸ್ಥಳೀಯ ಸಂಸ್ಥೆ ಕಛೇರಿಯಲ್ಲಿ ಖಾತಾಬದಲಾವಣೆ, ಆಸ್ತಿ ತೆರಿಗೆ ನಿಗಧಿಪಡಿಸುವ ಬಗ್ಗೆ ಹಾಗೂ ಇತರೆ ಇನ್ಯಾವುದೇ ಕೆಲಸಕಾರ್ಯಗಳಿಗೆ ಉಪಯೋಗಿಸಿಕೊಳ್ಳಲು (Data Integration) ಕೋರಿದೆ.

6) ರೇರಾ ಕಾಯ್ದೆ Section 32 ರಲ್ಲಿರುವ ಈ ಕೆಳಕಂಡ ಅಂಶಗಳ ಬಗ್ಗೆ ಅಗತ್ಯ ಕ್ರಮ ಕೋರಿದೆ.

7) ಪರಿತ್ಯಾಜನ ಪತ್ರ (Relinquishment deed) ಬಗ್ಗೆ ರಾಜ್ಯಾದ್ಯಂತಹ ಹಲವಾರು ರೀತಿಯ ನಮೂನೆಗಳಲ್ಲಿ ಯೋಜನೆಯ ವಿವಿಧ ಹಂತಗಳಲ್ಲಿ ಮಾಡಲಾಗುತ್ತದೆ. ಇನ್ನು ಮುಂದೆ ಎಲ್ಲಾ ಪರಿತ್ಯಾಜನ ಪತ್ರಗಳ ಒಂದೇ Standard ನಮೂನೆಯಲ್ಲಿ ಇರಬೇಕಾಗಿದ್ದು ಹಾಗೂ ಪೂರ್ಣ ಪ್ರಮಾಣ ಎಲ್ಲಾ ಅಭಿವೃದ್ಧಿ ಕೆಲಸ ಕಾರ್ಯಗಳು ಪೂರ್ಣಗೊಂಡ ನಂತರ ಮತ್ತು ಸದರಿ ಹಸ್ತಾಂತರ ಮುಂದಿನ ಉಸ್ತುವಾರಿ (Maintenance) ಗಾಗಿ ಎಂಬ ಅಂಶವನ್ನು ಅಡವಳಿಸಿ ಪರಿತ್ಯಾಜನ ಪತ್ರ (Relinquishment deed) ವನ್ನು ನೋಂದಣಿ ಮಾಡಬೇಕಾಗಿರುತ್ತದೆ.

8) ಕರ್ನಾಟಕ ರಾಜ್ಯಾದ್ಯಂತ ಎಲ್ಲಾ ನಕ್ಷೆ ಮಂಜೂರಾತಿ ನೀಡುವ ಕಛೇರಿಗಳ ಎಲ್ಲಾ ನಡವಳಿಕೆಗಳಲ್ಲಿ ಏಕರೂಪತೆಯನ್ನು ತರಬೇಕಾಗಿರುತ್ತದೆ.

32. The Authority shall in order to facilitate the growth and promotion of a healthy, transparent, efficient and competitive real estate sector make recommendations to the appropriate Government of the competent authority, as the case may be, on,—

(a) protection of interest of the allottees, promoter and real estate agent;

(b) creation of a single window system for ensuring time bound project approvals and clearances for timely completion of the project;

(c) creation of a transparent and robust grievance redressal mechanism against acts of ommission and commission of competent authorities and their officials;

(d) measures to encourage investment in the real estate sector including measures to increase financial assistance to affordable housing segment;

(e) measures to encourage construction of environmentally sustainable and affordable housing, promoting standardisation and use of appropriate construction materials, fixtures, fittings and construction techniques;

(f) measures to encourage grading of projects on various parameters of development including grading of promoters;

(g) measures to facilitate amicable conciliation of disputes between the promoters and the allottees through dispute settlement forums set up by the consumer or promoter associations;

(h) measures to facilitate digitization of land records and system towards conclusive property titles with title guarantee;

(i) to render advice to the appropriate Government in matters relating to the development of real estate sector;

(j) any other issue that the Authority may think necessary for the promotion of the real estate sector.

ಸದರಿ ಮೇಲ್ಕಂಡ ಅಂಶಗಳ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ಕೋರಿದೆ, ಹಾಗೂ ಖುದ್ದಾಗಿ ತಮ್ಮ ಕಛೇರಿಯಲ್ಲಿ ಹಾಜರಾಗಿ ವಿವರಿಸಲು ಸಮಯವಕಾಶವನ್ನು ಕೋರಿದೆ.

ತಮ್ಮ ವಿಶ್ವಾಸಿ,

ಕಾರ್ಯದರ್ಶಿಗಳು,
ರೇರಾ.

ಅನುಬಂಧ-4

# ನಗರಸಭಾ ಕಾರ್ಯಾಲಯ, ಸಾಗರ.

ಸಾಗರ ನಗರಸಭೆ ವ್ಯಾಪ್ತಿಯಲ್ಲಿ ನಿರ್ಮಾಣಗೊಂಡಿರುವ ಅಭಿವೃದ್ಧಿ ಕಾಮಗಾರಿ ಪೂರ್ಣಗೊಂಡ ಖಾಸಗಿ ಬಡಾವಣೆಗಳ ವಿವರ ಅನುಬಂಧ-೦೬

| ಕ್ರ.ಸಂ | ಮಾಲೀಕರ ಹೆಸರು | ವಾರ್ಡ್ | ಬ್ಲಾಕ್ | ವಿಳಾಸ ಸರ್ವೆ ನಂ | ಒಟ್ಟು ಲೇ ಔಟ್ ಅಳತೆ | ಕಡತ ಸಂಖ್ಯೆ | ಒದಗಿಸಲಾದ ಮೂಲಭೂತ ಸೌಕರ್ಯಗಳ ವಿವರಗಳು. |
|---|---|---|---|---|---|---|---|
| 1 | ಲಕ್ಷ್ಮೀ ಗೆಗ್ಗೆ ಮತ್ತು ಇತರರು | 2 | 50 | ಮಂಕೋಡು ಸ ನಂ:13/3 | 05 ಎಕರೆ 0.25 ಗುಂಟೆ | ಸಿ3ಸಿಆರ್ 343/13-14 ಪೂರ್ಣ ನಿವೇಶನ ಖಾತೆ ಆಗಿದೆ | ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿ ಪೂರ್ಣಗೊಳಸಿದೆ. |
| 2 | ಶಹನಾಜ್ ಬಿನ್ ಮಹಮ್ಮದ್ ಹಾಜಿ | '11 | 23 | ನೀರ್ಗೋಡು ಸ.ನಂ:10/2, 10/3 | 4.26 ಎಕರೆ | ಸಿ3ಸಿಆರ್ 39/2013-14 ಖಾತೆ ಆಗಿವೆ. | ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿ ಪೂರ್ಣಗೊಳಸಿದೆ. |
| 3 | ಸುರೇಶ ಬಿನ್ ಗಣಪತಿಗೌಡ | 11 | 23 | ನೀರ್ಗೋಡು: ಸ ನಂ 1/11 | 3.00 ಎಕರೆ | ಸಿ3ಸಿಆರ್ 602/14-15 ಖಾತೆ ಆಗಿದೆ. | ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿ ಪೂರ್ಣಗೊಳಸಿದೆ. |
| 4 | ಕೆ.ಜಿ.ಪಂಡುರಂಗಪ್ಪ ಬಿನ್ ರಾಮಪ್ಪ | 6 | | ಅಣಲೆಕೊಪ್ಪ 33/1 | 3ಎಕರೆ | ಸಿ4ಸಿಆರ್ 246/15-16 ಪೂರ್ಣ ಖಾತೆಯಾಗಿದೆ. | ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿ ಪೂರ್ಣಗೊಳಸಿದೆ. |
| 5 | ಜಿ ವಿ ಮನೋಹರ ಬಿನ್ ವೀರಪ್ಪಯ್ಯ | | 44 | ಮಂಕೋಡು 30/2 30/4 | 1 ಎಕರೆ 0.36 ಗುಂಟೆ | ಸಿ3ಸಿಆರ್ 68/15-16 40% ನಿವೇಶನ ಖಾತೆ ಆಗಿದೆ | ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿ ಪೂರ್ಣಗೊಳಸಿದೆ. |
| 6 | ಎಸ್.ಎಮ್.ಕುಮಾರ್ ಬಿನ್ ಮಲ್ಲಣ್ಣ | | | ಮಂಕೋಡು 43, 44 | 7.00ಎಕರೆ 11.00ಗುಂಟೆ | - | ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿ ಪೂರ್ಣಗೊಳಸಿದೆ. |
| 7 | ಎನ್.ಜಿ. ಪೈ | 5 &6 | | ಅಣಲೆಕೊಪ್ಪ 5 | 4 ಎಕರೆ 35 ಗುಂಟೆ | - | ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿ ಪೂರ್ಣಗೊಳಸಿದೆ. |
| 8 | ಹುಚ್ಚಪ್ಪ ಬಿನ್ ಬಂಗಾರಪ್ಪ | 6 | | ಅಣಲೆಕೊಪ್ಪ 22/10 | 3 ಎ 4-ಗು | - | ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿ ಪೂರ್ಣಗೊಳಸಿದೆ. |
| 9 | ಇಬ್ರಾಹಿಂ ಬಿನ್ ಕೋಡಿ ಮಹಮ್ಮದ್ & ಶ್ರೀಮತಿ ಎಮ್ ಯು ಶಹನಾಜ್ ಕೋಂ ಆರೀಫ್ | 6 | | ಅಣಲೆಕೊಪ್ಪ 1/1, 1/2 | 7ಎ-23 ಗು | - | ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿ ಪೂರ್ಣಗೊಳಸಿದೆ. |

ಪೌರಾಯುಕ್ತರು,
ನಗರಸಭೆ ಸಾಗರ

ಅನುಬಂಧ-5

# ನಗರಸಭಾ ಕಾರ್ಯಾಲಯ, ಸಾಗರ.

## ಸಾಗರ ನಗರಸಭೆ ವ್ಯಾಪ್ತಿಯಲ್ಲಿ ನಿರ್ಮಾಣಗೊಂಡಿರುವ ಅಭಿವೃದ್ಧಿ ಕಾಮಗಾರಿಗಳು ಪ್ರಗತಿಯಲ್ಲಿರುವ ಖಾಸಗಿ ಬಡಾವಣೆಗಳ ವಿವರ ಅನುಬಂಧ-04

| ಕ್ರ.ಸಂ | ಮಾಲೀಕರ ಹೆಸರು | ವಾರ್ಡ್ | ಬ್ಲಾಕ್ | ವಿಳಾಸ ಸರ್ವೆ ನಂ | ಒಟ್ಟು ಲೇ ಔಟ್ ಅಳತೆ | ಕಡತ ಸಂಖ್ಯೆ | ಒದಗಿಸಲಾದ ಮೂಲಭೂತ ಸೌಕರ್ಯಗಳ ವಿವರಗಳು. |
|---|---|---|---|---|---|---|---|
| 1 | ನಾಗಪ್ಪ ಬಿನ್ ತಿಮ್ಮಯ್ಯ | 24 | | ಅರಳಕೊಪ್ಪ ಸ ನಂ 38/2 | 4 ಎಕರೆ 14.00 ಗುಂಟೆ | ಸಿ3ಸಿಆರ್ 608/09-10 ಪೂರ್ತಿ ನಿವೇಶನ ಆಗಿದೆ. | ನಗರಸಭೆ ಸಿವಿಲ್ ಕಾಮಗಾರಿಗಳ ಅಭಿವೃದ್ಧಿ ಶುಲ್ಕ ಪಾವತಿಸಿರುತ್ತಾರೆ. ವಿದ್ಯುತ್ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| 2 | ನಾಗಪ್ಪ ಬಿನ್ ಕೆರಿಯಪ್ಪ | 11 | 23 | ನೀರ್ಗೋಡು ಸ ನಂ 1/1, 1/6, 1/7 | 0.6 ಎಕರೆ | ಸಿ3ಸಿಆರ್ 601/09-10 40% ನಿವೇಶನ ಖಾತೆ ಆಗಿದೆ | ನಗರಸಭೆ ಸಿವಿಲ್ ಕಾಮಗಾರಿಗಳ ಅಭಿವೃದ್ಧಿ ಶುಲ್ಕ ಪಾವತಿಸಿರುತ್ತಾರೆ. ವಿದ್ಯುತ್ ಕಾಮಗಾರಿ ಪ್ರಾರಂಭಿಸಿರುವುದಿಲ್ಲ. ಶೇ.40% ರಷ್ಟು ಮಾತ್ರ ಖಾತೆ ದಾಖಲಿಸಿದೆ. |
| 3 | ಸಿದ್ದಪ್ಪ | 17 | 54 | ಜಂಬಗಾರು ಸ ನಂ 3/1ಎ1ಸಿಎ | 1 ಎಕರೆ | ಸಿ3ಸಿಆರ್ 363/10-11 ಪೂರ್ಣ ನಿವೇಶನ ಖಾತೆ ಆಗಿದೆ. | ಏಕ ನಿವೇಶನ |
| 4 | ಕೆ ಬಿ ಶ್ರೀನಾಥ್ | 17 | 34 | ಜಂಬಗಾರು ಸ ನಂ:48 | 2 ಎಕರೆ 13.00 ಗುಂಟೆ | ಸಿ5ಸಿಆರ್ 444/12-13 ನಿವೇಶನ ಖಾತೆ ಆಗಿದೆ | ನಗರಸಭೆ ಸಿವಿಲ್ ಕಾಮಗಾರಿಗಳ ಅಭಿವೃದ್ಧಿ ಶುಲ್ಕ ಪಾವತಿಸಿರುತ್ತಾರೆ. ಬೀದಿ ದೀಪಗಳ ಕಾಮಗಾರಿ ಮಾಲೀಕರೇ ಮಾಡತಕ್ಕದ್ದು. |
| 5 | ಟಿ ಎಸ್ ರಾಘವೇಂದ್ರ | 4 | | ಅಣಲೆಕೊಪ್ಪ ಸ ನಂ:22/9 | 0.18 ಗುಂಟೆ | ಸಿ3ಸಿಆರ್ 26/13-14 ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 6 | ಕೆ ಬಿ ಶ್ರೀನಾಥ್ | 4 | | ಅಣಲೆಕೊಪ್ಪ ಸ ನಂ :23/3ಬಿ 4 | 0.39 ಗುಂಟೆ | ಸಿ3ಸಿಆರ್ 30/13-14 ನಿವೇಶನ ಖಾತೆ ಆಗಿದೆ | ನಗರಸಭೆ ಸಿವಿಲ್ ಕಾಮಗಾರಿಗಳ ಅಭಿವೃದ್ಧಿ ಶುಲ್ಕ ಪಾವತಿಸಿರುತ್ತಾರೆ. ಬೀದಿ ದೀಪಗಳ ಕಾಮಗಾರಿ ಮಾಲೀಕರೇ ಮಾಡತಕ್ಕದ್ದು. |
| 7 | ಬಿ ಆರ್ ಸುರೇಶ | 31 | 45 | ಕಂಬಳಕೊಪ್ಪ ಸ ನಂ:3/2 | 3 ಎಕರೆ 19 ಗುಂಟೆ | ಸಿ3ಸಿಆರ್ 308/2013-14 40% ನಿವೇಶನ ಖಾತೆ ಆಗಿದೆ | ನಗರಸಭೆ ಸಿವಿಲ್ ಕಾಮಗಾರಿಗಳ ಅಭಿವೃದ್ಧಿ ಶುಲ್ಕ ಪಾವತಿಸಿರುತ್ತಾರೆ. ವಿದ್ಯುತ್ ಕಾಮಗಾರಿ ಪೂರ್ಣಗೊಳಿಸಿರುತ್ತಾರೆ ಖಾತೆದಾಖಲಿಸಿರುವುದಿಲ್ಲ. |
| 8 | ಚೌಡಮ್ಮ ಕೋಂ ಬೀರಪ್ಪ | 1 | 33 | ಭೀಮನೇರಿ ಸ ನಂ74 | 0.10 ಗುಂಟೆ | ಸಿ3ಸಿಆರ್ 368/14-15 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 9 | ಪಿ ರಾಮಪ್ಪ ಬಿನ್ ಪುಟ್ಟಪ್ಪ | 1 | 33 | ಭೀಮನೇರಿ ಸ ನಂ73 | 0.14 ಗುಂಟೆ | ಸಿ3ಸಿಆರ್ 367/14-15 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 10 | ಕೆ ಎಸ್ ಚಂದ್ರಶೇಖರ ಬಿನ್ ಕೆ ಶಂಕರ ಭಟ್ | 27 | | ಕಂಬಳಕೊಪ್ಪ ಸ.ನಂ 84/3 | 0.10 ಗುಂಟೆ | ಸಿ3ಸಿಆರ್ 4/14-15 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 11 | ಕೆ ಎಸ್ ಚಂದ್ರಶೇಖರ ಬಿನ್ ಎಸ್.ಕೆ.ನಾರಾಯಣಪ್ಪ | 17 | 55 | ಜಂಬಗಾರು ಸ ನಂ:5/1 | 0.08 ಗುಂಟೆ | ಸಿ3ಸಿಆರ್ 11/14-15 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |

| ಕ್ರ.ಸಂ | ಮಾಲೀಕರ ಹೆಸರು | ವಾರ್ಡ್ | ಬ್ಲಾಕ್ | ವಿಳಾಸ ಸರ್ವೆ ನಂ | ಒಟ್ಟು ಲೇ ಔಟ್ ಅಳತೆ | ಕಡತ ಸಂಖ್ಯೆ | ಒದಗಿಸಲಾದ ಮೂಲಭೂತ ಸೌಕರ್ಯಗಳ ವಿವರಗಳು. |
|---|---|---|---|---|---|---|---|
| 12 | ವಿಶ್ವೇಶ್ವರಪ್ಪಗೌಡ | 17 | 34 | ಜಂಬಗಾರು ಸ.ನಂ:36/3 | 0.03.08 ಗುಂಟೆ | ಸಿಸಿಆರ್ 420/14-15 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 13 | ಸುವರ್ಣ ಕೆ ಬಿನ್ ಕೃಷ್ಣಪ್ಪ ಕೆ | 5 | | ಮಂಗಳಬೀಸು ಸ,.ನಂ 2/8ಎ | 0.14.18 ಗುಂಟೆ | ಸಿಸಿಆರ್ 404/14-15 ಏಕ ನಿವೇಶನ ಖಾತೆ ಆಗಿದೆ ಪೆಟ್ರೋಲ್ ಬಂಕ್ ವಾಣಿಜ್ಯ ಉದ್ದೇಶ | ಏಕ ನಿವೇಶನ |
| 14 | ಎನ್ ಸಿ ನೀಲಕಂಠ ಬಿನ್ ಚಂದ್ರಶೇಖರ್ | 18 | 35 | ಜಂಬಗಾರು ಸ ನಂ:5/1ಬಿ 23 | 0.38 ಗುಂಟೆ | ಸಿಸಿಆರ್ 495/14-15 ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 15 | ಮಾರುತಿ ಕೋಂ ಚಿದಂಬರ | 7/2 | 48 | ಅಣಲೆಕೊಪ್ಪ ಸ.ನಂ 12/3 | 4 ಎಕರೆ | ಸಿಸಿಆರ್ 439/14-15 40% ನಿವೇಶನ ಖಾತೆ ಆಗಿದೆ | ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದ್ದು. ಶೇ.40% ರಷ್ಟು ಮಾತ್ರ ಖಾತೆ ದಾಖಲಾಗಿದೆ. |
| 16 | ಮಹೇಶ ವಿ ಬಿನ್ ವೈಕುಂಟಾಚಾರ್ | 26 | 22 | ಅಣಲೆಕೊಪ್ಪ ಸ.ನಂ:37/2 | 4ಎಕರೆ | ಸಿಸಿಆರ್ 58/15-16 ನಿವೇಶನ ಖಾತೆ ಆಗಿದೆ | ಶೇ.40ರಷ್ಟು ನಿವೇಶನಗಳ ಖಾತೆ ದಾಖಲಿಸಿದೆ. |
| 17 | ಕೆ ಸುರೇಶ ಬಿನ್ ಕೆ ಎ ಕೃಷ್ಣಮೂರ್ತಿ | 17 | 54 | ಜಂಬಗಾರು ಸ.ನಂ:61/1 61/2 | 4 ಎಕರೆ | ಸಿಸಿಆರ್ 308/15-16 ನಿವೇಶನ ಖಾತೆ ಆಗಿದೆ | ಶೇ.40ರಷ್ಟು ನಿವೇಶನಗಳ ಖಾತೆ ದಾಖಲಿಸಿದೆ. |
| 18 | ಎನ್ ನದೀಂ ಬಿನ್ ನೂರುದ್ದೀನ್ | 17 | 34 | ಜಂಬಗಾರು ಸ ನಂ:30/3 ಎ | 0.30 ಗುಂಟೆ | ಸಿಸಿಆರ್ 338/15-16 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 19 | ಕೆ ಬಿ ಶ್ರೀನಾಥ ಬಿನ್ ಕುಡಸಲ ಭಿಮಪ್ಪ | 30 | 32 | ಅಣಲೆಕೊಪ್ಪ ಸ ನಂ:84/4 | 2 ಎಕರೆ 0.22 ಗುಂಟೆ | ಸಿಸಿಆರ್ 194/15-16 ನಿವೇಶನ ಖಾತೆ ಆಗಿದೆ | ಅಭಿವೃದ್ಧಿ ಕಾಮಗಾರಿ ಪೂರ್ಣಗೊಂಡಿದ್ದು ಬೀದಿ ದೀಪಕಾಮಗಾರಿ ಪ್ರಗತಿಯಲ್ಲಿದೆ. |
| 20 | ಮಹಮ್ಮದ್ ಸಮೀರ್ ಬಿನ್ ಅಬ್ದುಲ್ ಖಾದರ್ | 17 | 54 | ಬಳಸಗೋಡು ಸ ನಂ:62/3 | 0.8.04 ಗುಂಟೆ | ಸಿಸಿಆರ್ 340/15-16 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 21 | ಆಶಾ ಜಿ ಕೋಂ ನಾಗೇಶ್ | 4 | | ಅಣಲೆಕೊಪ್ಪ ಸ ನಂ:17/19 | 0.2 ಗುಂಟೆ | ಸಿಸಿಆರ್ 339/15-16 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 22 | ಎಸ್ ಎಸ್ ನಾಗರಾಜ ಬಿನ್ ಎಸ್ ಟಿ ಸತ್ಯನಾರಾಯಣ ರಾವ್ | 2 | 50 | ಮಂಕೋಡು ಸ ನಂ:29/6 | 0.17 ಗುಂಟೆ | ಸಿಸಿಆರ್ 91/15-16 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 23 | ಅಕ್ತರಿ ಬೇಗಂ | 9 | 51 | ಮಂಕಳಲೆ ಸ ನಂ:85/21 | 0.13 ಗುಂಟೆ | ಸಿಸಿಆರ್ 149/15-16 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 24 | ಕೆ ನಾಗರಾಜ ಬಿನ್ ಗುರು ಮೂರ್ತಿ | 1 | 44 | ಮಂಗಳಬೀಸು ಸ ನಂ 16/3 | 0.22 ಗುಂಟೆ | ಸಿಸಿಆರ್ 97/15-16 40% ನಿವೇಶನ ಖಾತೆ ಆಗಿದೆ | ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದೆ. ಶೇ.40% ರಷ್ಟು ಖಾತೆ ಆಗಿದೆ. |
| 25 | ಎಂ ಹೆಚ್ ರಾಮಸ್ವಾಮಿ | 11/23 | 23 | ಸಣ್ಣ ಮನೆ ಗ್ರಾಮ ಸ ನಂ:16/1 16/4 | 48 ನಿವೇಶನ | ಸಿಸಿಆರ್ 407/2016-17 40% ಖಾತೆ ಆಗಿದೆ | ಏಕ ನಿವೇಶನ |

| ಕ್ರ | ಮಾಲೀಕರ ಹೆಸರು | ವಾರ್ಡ್ | ಬ್ಲಾಕ್ | ವಿಳಾಸ ಸರ್ವೆ ನಂ | ಒಟ್ಟು ಲೇ ಔಟ್ ಅಳತೆ | ಕಡತ ಸಂಖ್ಯೆ | ಒದಗಿಸಲಾದ ಮೂಲಭೂತ ಸೌಕರ್ಯಗಳ ವಿವರಗಳು. |
|---|---|---|---|---|---|---|---|
| 26 | ಎಸ್ ಕೆ ಚಂದ್ರ ಬಿನ್ ಕೃಷ್ಣಪ್ಪ ಮತ್ತು ಶ್ರೀಮತಿ ವನಜಾಕ್ಷಿ ಕೋಂ ಚಂದ್ರ | 11 | 23 | ಮಂಕಳಲಲೆ ಗ್ರಾಮದ ಸ..ನಂ:70/1 ಬಿ 1 ಮತ್ತು 70/1 ಬಿ 2 | ಒಟ್ಟು 1 ಎಕರೆ | ಸಿ3ಸಿಆರ್ 30/16-17 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 27 | ಬಿ ನೂರುದ್ದೀನ್ ಬಿನ್ ಬರ್ಹಾನುದ್ದೀನ್ | 6 | 47 | ಅಣಲೆಕೊಪ್ಪ ಸ ನಂ:38/3 | 0.10 ಗುಂಟೆ | ಸಿ3ಸಿಆರ್ 405/16-17 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 28 | ಬಿ ದುರ್ಗಪ್ಪ ಬಿನ್ ಬಂಗಾರಪ್ಪ | 14 | | ಸಣ್ಣಮನೆ ಗ್ರಾಮ ಸ.ನಂ:11/1ಎ1 | 0.20 ಗುಂಟೆ | ಸಿ3ಸಿಆರ್ 335/16-17 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 29 | ರತ್ನಮ್ಮ , ವಿನಾಯಕ , ತಿಮ್ಮಪ್ಪ | 1 | 33 | ಮಂಗಳಬೀಸು 5/2 | 3 ಎಕರೆ 23 ಗುಂಟೆ | ಸಿ3ಸಿಆರ್ 326/16-17 40% ನಿವೇಶನ ಖಾತೆ ಆಗಿದೆ | ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದ್ದು ಶೇ.40% ರಷ್ಟು ಖಾತೆ ದಾಖಲಿಸಿದೆ. |
| 30 | ಹೆಚ್ ಜಿ ಗುರುರಾಜ್ ಬಿನ್ ಗಣಪತಿ ವಿಠಲ | 28 | 9 | ಕಂಬಳಕೊಪ್ಪ ಸ ನಂ:83/2 | 3 ಎಕರೆ | ಸಿ3ಸಿಆರ್ 297/16-17 40% ನಿವೇಶನ ಖಾತೆ ಆಗಿದೆ | ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದ್ದು ಶೇ.40% ರಷ್ಟು ಖಾತೆ ದಾಖಲಿಸಿದೆ. |
| 31 | ಸುಧಾಕರ ಬಿನ್ ಕೆರಿಯಪ್ಪ | 17 | 54 | ಸಣ್ಣಮನೆ ಗ್ರಾಮ ಸ.ನಂ:21/1ಎ4 | 0.ಎಕರೆ 14ಗುಂಟೆ | ಸಿ5ಸಿಆರ್ 63/16-17 ಏಕ ನಿವೇಶನ | ಏಕ ನಿವೇಶನ |
| 32 | ಸುವರ್ಣ ಕೆ ಬಿನ್ ಕೃಷ್ಣಪ್ಪ ಕೆ | 2 | 53 | ಮಂಗಳಬೀಸು ಸ ನಂ 2/2 | 14.08 ಗುಂಟೆ | ಸಿ5ಸಿಆರ್ 146/16-17 ಏಕ ನಿವೇಶನ | ಏಕ ನಿವೇಶನ |
| 33 | ಜ್ಯೋತಿ ಟಿ ಎಂ ಕೋಂ ಜಿ ಎಸ್ ಪ್ರಸನ್ನ | 6/11 | 49 | ಸಂಗಳ ಗ್ರಾಮ ಸ ನಂ 66 | 2 ಎಕರೆ | ಸಿ3ಸಿಆರ್ 218/16-17 40% ನಿವೇಶನ ಖಾತೆ ಆಗಿದೆ | ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದ್ದು ಶೇ.40% ರಷ್ಟು ಖಾತೆ ದಾಖಲಿಸಿದೆ. |
| 34 | ಕೆ ಅಬ್ಬಾಸ್ ಮತ್ತು ಇತರರು | 17 | 55 | ಬಳಸಗೋಡು 56, 57, 58/2, 63/2, 63/3, 64/1, 64/2, | 20 ಎಕರೆ 06.08 ಗುಂಟೆ | ಸಿ3ಸಿಆರ್ 256/16-17 40% ನಿವೇಶನ ಖಾತೆ ಆಗಿದೆ | ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದ್ದು ಶೇ.40% ರಷ್ಟು ಖಾತೆ ದಾಖಲಿಸಿದೆ. ವಿದ್ಯುತ್ ಕಾಮಗಾರಿ ಪೂರ್ಣಗೊಳಿಸಿದ್ದು ಸಿವಿಲ್ ಕಾಮಗಾರಿ ಪ್ರಗತಿಯಲ್ಲಿದೆ. |
| 35 | ವನಜಾಕ್ಷಿ ಕೋಂ ಚಂದ್ರು | 10/4 | 39 | ಮಂಕಳಲೆ ಸ ನಂ:92 | 30.00 ಗುಂಟೆ | ಸಿ3ಸಿಆರ್ 195/17-18 ಏಕ ನಿವೇಶನ ಖಾತೆ ಆಗಿದೆ. | ಏಕ ನಿವೇಶನ |
| 36 | ಸುನೀತಾ ಮತ್ತು ಸುಶೀಲ | 23 | 25 | ಅರಳಕೊಪ್ಪ ಗ್ರಾಮ ಸ ನಂ:30 | 15 ಎಕರೆ | ಸಿ3ಸಿಆರ್ 16/17-18 40% ನಿವೇಶನ ಖಾತೆ ಆಗಿದೆ | ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದ್ದು ಶೇ.40% ರಷ್ಟು ಖಾತೆ ದಾಖಲಿಸಿದೆ. |
| 37 | ಎಸ್ ಎನ್ ಚಂದ್ರಶೇಖರ್ ಬಿನ್ ಎಸ್ ಕೆ ನಾರಾಯಣಪ್ಪ | 5 | 27 | ಅಣಲೆಕೊಪ್ಪ ಸ ನಂ:17/32 | 0.02 ಗುಂಟೆ | ಸಿ3ಸಿಆರ್ 360/17-18 ಏಕ ನಿವೇಶನ ಖಾತೆ ಆಗಿದೆ | ಏಕ ನಿವೇಶನ |
| 38 | ಕೆ ಸುರೇಶ ಬಿನ್ ಕೆ ಎ ಕೃಷ್ಣಮೂರ್ತಿ | 2/19 | 53/19 | ಮಂಕೋಡು ಸ ನಂ:13/8 13/9 | 2 ಎಕರೆ 0.20 ಗುಂಟೆ | ಸಿ3ಸಿಆರ್ 39/17-18 40% ನಿವೇಶನ ಖಾತೆ ಆಗಿದೆ | ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದ್ದು ಶೇ.40% ರಷ್ಟು ಖಾತೆ ದಾಖಲಿಸಿದೆ. |
| 39 | ವೆಂಕಟೇಶ ಬಿ ನಾಯಕ್ ಬಿನ್ ಬೈರಪ್ಪ | 16 | 14 | ಜಂಬಗಾರು ಸ ನಂ 36/4 | 0.ಎಕರೆ 02 ಗುಂಟೆ | ಸಿ5ಸಿಮಿಸ್ ನಂ72/17-18 ಏಕ ನಿವೇಶನ | ಏಕ ನಿವೇಶನ |

| ಕ್ರ.ಸಂ | ಮಾಲೀಕರ ಹೆಸರು | ವಾರ್ಡ್ | ಬ್ಲಾಕ್ | ವಿಳಾಸ ಸರ್ವೆ ನಂ | ಒಟ್ಟು ಲೇ ಔಟ್ ಅಳತೆ | ಕಡತ ಸಂಖ್ಯೆ | ಒದಗಿಸಲಾದ ಮೂಲಭೂತ ಸೌಕರ್ಯಗಳ ವಿವರಗಳು. |
|---|---|---|---|---|---|---|---|
| 40 | ಕೆ ಸುರೇಶ ಬಿನ್ ಕೆ ಎ ಕೃಷ್ಣಮೂರ್ತಿ | 2 | 53/20 | ಮಂಕೋಡು ಸ .ನಂ 13/2 | 3 ಎಕರೆ 0.05 ಗುಂಟೆ | ಸಿ3ಸಿಆರ್ 16/18-19 40% ನಿವೇಶನ ಖಾತೆ ಆಗಿದೆ | ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದ್ದು ಶೇ.40% ರಷ್ಟು ಖಾತೆ ದಾಖಲಿಸಿದೆ. |
| 41 | ಯು.ಸಿ ಸಿದ್ದಲಿಂಗೇಶ್ವರ ಮತ್ತು ಇತರರು | 1 | | ಮಂಗಳಬೀಸು 3/1 | 9 ಎಕರೆ | - | ಅಭಿವೃದ್ಧಿ ಕಾಮಗಾರಿ ಪೂರ್ಣಗೊಂಡಿರುವುದಿಲ್ಲ. |
| 42 | ರಾಧಾಮಣಿ | 5 | | ಅಣಲೆಕೊಪ್ಪ 17/2. | 1 ಎಕರೆ 39 ಗುಂಟೆ | - | ನಗರಸಭೆಗೆ ಅಭಿವೃದ್ಧಿ ಶುಲ್ಕ ಪಾವತಿಸಿರುತ್ತಾರೆ. ನಗರಸಭೆಯಿಂದ ಅಭಿವೃದ್ಧಿ ಕಾಮಗಾರಿ ನಿರ್ವಹಿಸಬೇಕಾಗಿರುತ್ತದೆ. |
| 43 | ಜ್ಞಾನೇಶ್ವರ, ಸತ್ಯನಾರಾಯಣ. ನಿರಂಜನ. ಗಣೇಶ | 17 | | ಜಂಬಗಾರು 67/1 | 3.00ಎಕರೆ 00. ಗುಂಟೆ | - | ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದ್ದು ಶೇ.40% ರಷ್ಟು ಖಾತೆ ದಾಖಲಿಸಿದೆ. |
| 44 | ಸುಶೀಲ ಕೋಂ ವಾದಿರಾಜ ಸುನೀತ ಕೋಂ ಸಂತೋಷ ಕುಮಾರ | 23 | 25 | ಅರಳಿಕೊಪ್ಪ ಸ ನಂ:24 ಮತ್ತು 30 | 12.00 ಎಕರೆ19 ಗುಂಟೆ ಮತ್ತು 15 ಎಕರೆ | | ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದ್ದು ಶೇ.40% ರಷ್ಟು ಖಾತೆ ದಾಖಲಿಸಿದೆ. |

ಪೌರಾಯುಕ್ತರು,
ನಗರಸಭೆ ಸಾಗರ

RNI No. KARBIL/2001/47147



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ-III | ಬೆಂಗಳೂರು, ಶುಕ್ರವಾರ, ನವೆಂಬರ್ ೩೦, ೨೦೧೮ (ಮಾರ್ಗಶಿರ ೯, ಶಕ ವರ್ಷ ೧೯೪೦) | ನಂ. ೧೪೭೨ |
|---|---|---|
| Part-III | Bengaluru, Friday, November 30, 2018 (Margasira 9, Shaka Varsha 1940) | No. 1472 |



ನಗರಾಭಿವೃದ್ಧಿ ಸಚಿವಾಲಯ

ಅಧಿಸೂಚನೆ

ಸಂಖ್ಯೆ: ನಅಇ 60 ಮೈಅಪ್ರಾ 2018, ಬೆಂಗಳೂರು, ದಿನಾಂಕ: 22.11.2018.

ವಿಷಯ: ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961 ರಡಿ ಖಾಸಗಿ ಬಡಾವಣೆಗಳ ವಿನ್ಯಾಸ ನಕ್ಷೆಗಳನ್ನು ಅನುಮೋದನೆ ನೀಡಲಾಗಿದ್ದು, 2005ನೇ ಸಾಲಿನಿಂದ 2015ನೇ ಸಾಲಿನವರೆಗಿನ ಅವಧಿಯಲ್ಲಿ ಅನುಮೋದನೆಗೊಂಡಿರುವ ವಿನ್ಯಾಸಗಳಲ್ಲಿನ ನಿವೇಶನಗಳನ್ನು ಬಿಡುಗಡೆಗೊಳಿಸುವ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದ ಆದೇಶದ ಹಿನ್ನೆಲೆಯಲ್ಲಿ ಮಾರ್ಗಸೂಚಿಗಳನ್ನು ಹೊರಡಿಸುವ ಕುರಿತು.

ಉಲ್ಲೇಖ:
1. ಸರ್ಕಾರದ ಸುತ್ತೋಲೆ ಸಂ: ನಅಇ 112 ಬೆಂರೂಪ್ರಾ 2005, ದಿನಾಂಕ: 26.05.2005.
2. ಸರ್ಕಾರದ ಸುತ್ತೋಲೆ ಸಂ: ನಅಇ 599 ಮೈಅಪ್ರಾ 2012, ದಿನಾಂಕ: 03.12.2012.
3. ಸರ್ಕಾರದ ಸುತ್ತೋಲೆ ಸಂ: ನಅಇ 08 ಟಿಟಿಪಿ 2013, ದಿನಾಂಕ: 24.05.2014.
4. ಸರ್ಕಾರದ ಪತ್ರ ಸಂ: ನಅಇ 239 ಬಿಎಂಆರ್ 2012, ದಿನಾಂಕ: 27.09.2014.
5. ಸರ್ಕಾರದ ಅಧಿಸೂಚನೆ ಸಂ: ಸಂವ್ಯಶಾಇ 24 ಶಾಸನ 2015, ದಿನಾಂಕ: 10.09.2015 ರಲ್ಲಿ ಹೊರಡಿಸಿರುವ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ, 2015.

ನಗರಾಭಿವೃದ್ಧಿ ಪ್ರಾಧಿಕಾರಗಳು / ಯೋಜನಾ ಪ್ರಾಧಿಕಾರಗಳು ಹಾಗೂ ಪೌರ ಯೋಜನಾ ಪ್ರಾಧಿಕಾರಗಳು ಖಾಸಗಿ ವಿನ್ಯಾಸಗಳನ್ನು ಅನುಮೋದಿಸಿದ ನಂತರ ವಿನ್ಯಾಸಗಳ ಅಭಿವೃದ್ಧಿ ಹಾಗೂ ನಿವೇಶನಗಳ ಬಿಡುಗಡೆಯ ಕುರಿತು ಜರುಗಿಸಬೇಕಾದ ಕ್ರಮದ ಬಗ್ಗೆ ಉಲ್ಲೇಖ (1), (2) ಹಾಗೂ (3) ರ ಸರ್ಕಾರದ ಸುತ್ತೋಲೆಗಳಲ್ಲಿ ನಿರ್ದೇಶನ ನೀಡಲಾಗಿರುತ್ತದೆ. ದಿನಾಂಕ: 10.09.2015ರಿಂದ ಉಲ್ಲೇಖ (5)ರ ಸರ್ಕಾರದ ಅಧಿಸೂಚನೆಯು ಜಾರಿಯಲ್ಲಿದ್ದು, ಖಾಸಗಿ ವಿನ್ಯಾಸಗಳನ್ನು ಪೂರ್ಣ ಪ್ರಮಾಣದಲ್ಲಿ ಅಭಿವೃದ್ಧಿಪಡಿಸಿದ ನಂತರ ನಿವೇಶನಗಳ ಬಿಡುಗಡೆ ಮಾಡಲು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ, 2015ರಲ್ಲಿ ನಿಗಧಿಪಡಿಸಲಾಗಿರುತ್ತದೆ. ಇದಕ್ಕೆ ಪೂರ್ವದಲ್ಲಿ ಪ್ರಾಧಿಕಾರದಿಂದ ಅನುಮೋದಿಸಲಾದ ವಿನ್ಯಾಸಗಳನ್ನು ಅನುಮೋದನೆಗೊಂಡ 05 ವರ್ಷಗಳ ಒಳಗಾಗಿ ಅಭಿವೃದ್ಧಿಪಡಿಸಲು ಉಲ್ಲೇಖ (1) ರ ಸುತ್ತೋಲೆಯ ನಿರ್ದೇಶನವಿರುತ್ತದೆ.

ಉಲ್ಲೇಖ (4)ರ ಸರ್ಕಾರದ ಪತ್ರದಲ್ಲಿ ವಿನ್ಯಾಸ ಅನುಮೋದನೆಗೊಂಡು 5 ವರ್ಷಗಳು ಕಳೆದ ನಂತರ ಅಭಿವೃದ್ಧಿಪಡಿಸಿ ಬಾಕಿ ನಿವೇಶನಗಳನ್ನು ಪ್ರಾಧಿಕಾರದಿಂದ ಬಿಡುಗಡೆ ಮಾಡುವಂತೆ ಕೋರಿ ಬರುವ ಪ್ರಸ್ತಾವನೆಗಳಿಗೆ ಪ್ರತಿ

ವರ್ಷದ ನಿವೇಶನದ ಮಾರ್ಗಸೂಚಿ ಬೆಲೆಯ ಶೇ.2ರಷ್ಟು ದಂಡ ವಿಧಿಸಿ ಉಳಿದ ಶೇ.40ರಷ್ಟು ನಿವೇಶನಗಳನ್ನು ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಬಹುದೆಂದು ಪತ್ರದ ಮುಖೇನ ನಿರ್ದೇಶನ ನೀಡಲಾಗಿರುತ್ತದೆ.

ಸದರಿ ನಿರ್ದೇಶನವನ್ನು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ WP.No. 12468-12472/2017 ಮತ್ತು WP No. 12473-12474/2017 (LB-RES) ರಲ್ಲಿ ಪ್ರಶ್ನಿಸಲಾಗಿದ್ದು, ಉಲ್ಲೇಖ (4)ರಲ್ಲಿ ನೀಡಿರುವ ನಿರ್ದೇಶನವನ್ನು ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 04.07.2017ರ ಆದೇಶದಲ್ಲಿ ಅನೂರ್ಜಿತಗೊಳಿಸಿರುತ್ತದೆ.

ವರ್ಷಾನುಗಟ್ಟಲೆಯಿಂದ ನಿವೇಶನಕ್ಕಾಗಿ ಕಾಯುತ್ತಿರುವ ನಿವೇಶನ ರಹಿತ / ವಸತಿ ರಹಿತ ಸಾರ್ವಜನಿಕರ ಹಿತದೃಷ್ಟಿಯಿಂದ ಅನುಮೋದಿತ ವಿನ್ಯಾಸಗಳನ್ನು ಪೂರ್ಣ ಪ್ರಮಾಣದಲ್ಲಿ ಅಭಿವೃದ್ಧಿಗೊಳಿಸಿ ಬಾಕಿ ನಿವೇಶನಗಳನ್ನು ಪ್ರಾಧಿಕಾರಗಳಿಂದ ಬಿಡುಗಡೆ ಮಾಡಿಸಿಕೊಳ್ಳಲು ಒಂದು ವರ್ಷದ ಕಾಲಾವಕಾಶ ನೀಡಿ ನಂತರದ ಅವಧಿಯಲ್ಲಿ ಬರುವಂತಹ ಪ್ರಕರಣಗಳಲ್ಲಿ ಬಿಡುಗಡೆಗೆ ಬಾಕಿ ಇರುವ ನಿವೇಶನಗಳ ಮಾರ್ಗಸೂಚಿ ಬೆಲೆಯ ಶೇ.3 ರಷ್ಟು ಮೊತ್ತವನ್ನು ದಂಡದ ರೂಪದಲ್ಲಿ ಯೋಜನಾ ಪ್ರಾಧಿಕಾರಗಳಿಗೆ ಪಾವತಿಸಿಕೊಂಡು ನಿವೇಶನಗಳನ್ನು ಬಿಡುಗಡೆಗೊಳಿಸುವುದು ಸೂಕ್ತವಾಗಿರುತ್ತದೆ.

ಮೇಲ್ಕಂಡ ವಿವರಗಳ ಹಿನ್ನೆಲೆಯಲ್ಲಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 76K ರಲ್ಲಿರುವ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, 2005 ರಿಂದ 2015ನೇ ಸಾಲಿನವರೆಗಿನ ಅವಧಿಯಲ್ಲಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 17ರಡಿ ವಿನ್ಯಾಸ ನಕ್ಷೆ ಮಂಜೂರಾತಿ ಪಡೆದು ಸಂಪೂರ್ಣವಾಗಿ ಅಭಿವೃದ್ಧಿಪಡಿಸದೇ ಇರುವ ಪ್ರಕರಣಗಳಲ್ಲಿ ಈ ಕೆಳಕಂಡಂತೆ ಕ್ರಮವಹಿಸಲು ಆದೇಶಿಸಿದೆ.

1. 2005ನೇ ಸಾಲಿನಿಂದ 2015ನೇ ಸಾಲಿನ ಅವಧಿಯಲ್ಲಿ ಅನುಮೋದನೆಗೊಂಡಿರುವ ವಿನ್ಯಾಸಗಳನ್ನು ಪೂರ್ಣ ಪ್ರಮಾಣದಲ್ಲಿ ಅಭಿವೃದ್ಧಿಪಡಿಸದೇ ಇರುವಂತಹ ಪ್ರಕರಣಗಳನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಯಲ್ಲಿ ಅನುಮೋದಿತ ವಿನ್ಯಾಸದಲ್ಲಿನ ಎಲ್ಲಾ ಅಭಿವೃದ್ಧಿ ಕಾಮಗಾರಿಗಳನ್ನು ಪೂರ್ಣ ಪ್ರಮಾಣದಲ್ಲಿ ಪೂರ್ಣಗೊಳಿಸಿ ಬಾಕಿ ಇರುವ ನಿವೇಶನಗಳನ್ನು ಬಿಡುಗಡೆ ಮಾಡಲು ಕೋರಿ ಬರುವ ಪ್ರಸ್ತಾವನೆಗಳಿಗೆ ಯಾವುದೇ ದಂಡವಿಲ್ಲದೇ ಬಿಡುಗಡೆಗೊಳಿಸತಕ್ಕದ್ದು.
2. ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿ ಮೀರಿದ ನಂತರ ಅನುಮೋದಿತ ವಿನ್ಯಾಸದಲ್ಲಿನ ಎಲ್ಲಾ ಅಭಿವೃದ್ಧಿ ಕಾಮಗಾರಿಗಳನ್ನು ಪೂರ್ಣ ಪ್ರಮಾಣದಲ್ಲಿ ಪೂರ್ಣಗೊಳಿಸಿ ನಿವೇಶನ ಬಿಡುಗಡೆ ಕೋರಿ ಬರುವಂತಹ ಪ್ರಸ್ತಾವನೆಗಳಲ್ಲಿ ಬಿಡುಗಡೆಗೆ ಬಾಕಿ ಇರುವ ನಿವೇಶನಗಳ ಮಾರ್ಗಸೂಚಿ ಬೆಲೆಯ ಮೇಲೆ ಪ್ರತಿ ವರ್ಷಕ್ಕೆ ಶೇ.3ರಷ್ಟು ಮೊತ್ತವನ್ನು ದಂಡದ ರೂಪದಲ್ಲಿ ಸಂಬಂಧಿಸಿದ ಯೋಜನಾ ಪ್ರಾಧಿಕಾರಗಳು ಪಾವತಿಸಿಕೊಂಡು ಉಳಿಕೆ ನಿವೇಶನಗಳನ್ನು ಬಿಡುಗಡೆಗೊಳಿಸತಕ್ಕದ್ದು.
3. ಈ ಅಧಿಸೂಚನೆಯಲ್ಲಿನ ಅಂಶಗಳು ದಿನಾಂಕ: 26.05.2005 ರಿಂದ ದಿನಾಂಕ: 10.09.2015 ರವರೆಗೆ ಅನುಮೋದಿಸಲಾಗಿರುವ ಖಾಸಗಿ ವಿನ್ಯಾಸಗಳಿಗೆ ಮಾತ್ರ ಅನ್ವಯವಾಗಲಿದ್ದು, ದಿನಾಂಕ: 10.09.2015 ರ ನಂತರದಲ್ಲಿ ಉಲ್ಲೇಖ (5) ರ ಅಧಿಸೂಚನೆಯನ್ವಯ ಕಟ್ಟುನಿಟ್ಟಾಗಿ ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 500

# ಕರ್ನಾಟಕ ವಿಧಾನ ಸಭೆ

1. ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 444
2. ಸದಸ್ಯರ ಹೆಸರು : ಶ್ರೀ ಶ್ರೀಮಂತ್ ಬಾಳಾಸಾಹೇಬ್ ಪಾಟೀಲ್ (ಕಾಗವಾಡ)
3. ಉತ್ತರಿಸಬೇಕಾದ ದಿನಾಂಕ : 12-12-2018
4. ಉತ್ತರಿಸುವವರು : ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳು, ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರು.

| | ಪ್ರಶ್ನೆ | ಉತ್ತರ |
|---|---|---|
| ಅ | ಪ್ರಸಕ್ತ ಸಾಲಿನಲ್ಲಿ (2018-19) ಅಲ್ಪಸಂಖ್ಯಾತರ ಇಲಾಖೆ ವತಿಯಿಂದ ಬೆಳಗಾವಿ ಜಿಲ್ಲೆಗೆ ಬಿಡುಗಡೆ ಮಾಡಿರುವ ಅನುದಾನವೆಷ್ಟು; | **ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ:** ಪ್ರಸಕ್ತ ಸಾಲಿನಲ್ಲಿ (2018-2019) ಅಲ್ಪಸಂಖ್ಯಾತರ ನಿರ್ದೇಶನಾಲಯ ವತಿಯಿಂದ ಬೆಳಗಾವಿ ಜಿಲ್ಲೆಗೆ ರೂ.1632.44ಲಕ್ಷ ಅನುದಾನ ಬಿಡುಗಡೆ ಮಾಡಲಾಗಿದೆ.<br>**ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ**<br>2018-2019ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆಗೆ ರೂ.1827.08ಲಕ್ಷಗಳ ಗುರಿಯನ್ನು ನಿಗದಿಪಡಿಸಲಾಗಿದೆ.<br>**ಕರ್ನಾಟಕ ರಾಜ್ಯ ವಕ್ಫ್ ಮಂಡಳಿ**<br>2018-19ನೇ ಸಾಲಿನಲ್ಲಿ ಬಿಡುಗಡೆ ಮಾಡಲಾದ ಅನುದಾನದ ವಿವರ ಅನುಬಂಧ-1ರಲ್ಲಿ ನೀಡಲಾಗಿದೆ. |
| ಆ | ಸದರಿ ಅನುದಾನದಲ್ಲಿ ಬೆಳಗಾವಿ ಜಿಲ್ಲೆ ವ್ಯಾಪ್ತಿಗೆ ಬರುವ ಪ್ರತಿ ವಿಧಾನಸಭಾ ಕ್ಷೇತ್ರಗಳಿಗೆ ಬಿಡುಗಡೆ ಮಾಡಿರುವ ಅನುದಾನವೆಷ್ಟು: (ಕ್ಷೇತ್ರವಾರು ಮಾಹಿತಿ ನೀಡುವುದು) | **ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ:** ಬೆಳಗಾವಿ ಜಿಲ್ಲೆ ವ್ಯಾಪ್ತಿಗೆ ಬರುವ ಪ್ರತಿ ವಿಧಾನ ಸಭಾ ಕ್ಷೇತ್ರಗಳಿಗೆ ಬಿಡುಗಡೆ ಮಾಡಿದ ಅನುದಾನದ ವಿವರ **"ಅನುಬಂಧ-2"** ರಲ್ಲಿ ನೀಡಲಾಗಿದೆ.<br>**ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ**<br>ಬೆಳಗಾವಿ ಜಿಲ್ಲೆ ವ್ಯಾಪ್ತಿಗೆ ಬರುವ ಪ್ರತಿ ವಿಧಾನಸಭಾ ಕ್ಷೇತ್ರಗಳಿಗೆ ಈ ಕೆಳಕಂಡಂತೆ ಗುರಿಯನ್ನು ನಿಗದಿಪಡಿಸಲಾಗಿದೆ<br>ರೂ.ಲಕ್ಷಗಳಲ್ಲಿ |

| ಕ್ರ. ಸಂ | ವಿಧಾನಸಭಾಕ್ಷೇತ್ರ | ಮೊತ್ತ |
|---|---|---|
| 1 | ಅಥಣಿ | 102.45 |
| 2 | ಕಾಗವಾಡ | 101.95 |
| 3 | ಚಿಕ್ಕೋಡಿ | 105.45 |
| 4 | ನಿಪ್ಪಾಣಿ | 105.45 |
| 5 | ರಾಯಬಾಗ | 102.05 |
| 6 | ಕುಡಚಿ | 102.05 |
| 7 | ಹುಕ್ಕೇರಿ | 99.55 |
| 8 | ಯಮಕನಮರ್ಡಿ | 98.55 |
| 9 | ಗೋಕಾಕ | 102.05 |
| 10 | ಅರಭಾಂವಿ | 102.05 |
| 11 | ಬೈಲಹೊಂಗಲ | 98.95 |
| 12 | ಕಿತ್ತೂರ | 98.95 |
| 13 | ಸವದತ್ತಿ | 102.45 |
| 14 | ರಾಮದುರ್ಗ | 98.95 |
| 15 | ಬೆಳಗಾವಿ ಉತ್ತರ | 99.63 |
| 16 | ಬೆಳಗಾವಿ ದಕ್ಷಿಣ | 102.05 |
| 17 | ಬೆಳಗಾವಿ ಗ್ರಾಮೀಣ | 101.05 |
| 18 | ಖಾನಾಪೂರ | 99.95 |

**ಕರ್ನಾಟಕ ರಾಜ್ಯ ವಕ್ಫ್ ಮಂಡಳಿ**

2018-19ನೇ ಸಾಲಿನಲ್ಲಿ ಬಿಡುಗಡೆ ಮಾಡಲಾದ ಅನುದಾನದ ವಿವರ **ಅನುಬಂಧ-1**ರಲ್ಲಿ ನೀಡಲಾಗಿದೆ.

ಇ) ಬೆಳಗಾವಿ ಜಿಲ್ಲೆ ಕಾಗವಾಡ ವಿಧಾನಸಭಾ ಕ್ಷೇತ್ರಕ್ಕೆ ಯಾವ ಯಾವ ಲೆಕ್ಕಶೀರ್ಷಿಕೆಯಡಿ ಹಾಗೂ ಯೋಜನೆಯಡಿ ಎಷ್ಟೆಷ್ಟು ಅನುದಾನವನ್ನು ಮಂಜೂರು ಮಾಡಲಾಗಿದೆ? (ವಿವಿಧ ಲೆಕ್ಕಶೀರ್ಷಿಕೆವಾರು ಹಾಗೂ ಯೋಜನೆವಾರು ಸಂಪೂರ್ಣ ಮಾಹಿತಿ ನೀಡುವುದು)

**ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ:**

ಬೆಳಗಾವಿ ಜಿಲ್ಲೆ, ಕಾಗವಾಡ ವಿಧಾನಸಭಾ ಕ್ಷೇತ್ರಕ್ಕೆ ಬಿಡುಗಡೆಯಾದ ಅನುದಾನದ ವಿವರ ಈ ಕೆಳಕಂಡಂತಿದೆ.

**(ರೂ. ಲಕ್ಷಗಳಲ್ಲಿ)**

| ಲೆಕ್ಕಶೀರ್ಷಿಕೆ | ಯೋಜನೆ | ಬಿಡುಡೆಯಾದ ಅನುದಾನ |
|---|---|---|
| 2225-03-277-2-87 (117) | ಜೈನ್ ಬಿದಾಯಿ | 2.00 |
| 2225-03-800-0-07(059) | ಮುಸ್ಲಿಂ ಬಿದಾಯಿ | 1.00 |
| 4225-03-277-2-10 (386) | ಮಾನ್ಯ ಮುಖ್ಯ ಮಂತ್ರಿ ಅಭಿವೃದ್ಧಿ ಯೋಜನೆ | 25.00 |

**ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ**

ಬೆಳಗಾವಿ ಜಿಲ್ಲೆಕಾಗವಾಡ ವಿಧಾನ ಸಭಾ ಕ್ಷೇತ್ರಕ್ಕೆ ಈ ಕೆಳಕಂಡ ಯೋಜನೆಗಳಿಗೆ ಗುರಿಯನ್ನು ನಿಗದಿಪಡಿಸಲಾಗಿದೆ.

ರೂ.ಲಕ್ಷಗಳಲ್ಲಿ

| ಕ್ರ. ಸಂ | ಯೋಜನೆಗಳು | ಮೊತ್ತ. |
|---|---|---|
| 1 | ಸ್ವಯಂ ಉದ್ಯೋಗ ಸಹಾಯಧನ | 12.81 |
| 2 | ಶ್ರಮಶಕ್ತಿ | 9.00 |
| 3 | ಮೈಕ್ರೋ | 4.00 |
| 4 | ಅರಿವು | 38.74 |
| 5 | ಗಂಗಾ ಕಲ್ಯಾಣ ಕೊಳವೆ ಬಾವಿ | 10.00 |
| 6 | ಏತ ನೀರಾವರಿ | 15.98 |
| 7 | ಪಶು ಸಂಗೋಪನೆ | 4.40 |
| 8 | ಕೃಷಿ ಸಲಕರಣೆ | 2.00 |
| 9 | ಟ್ಯಾಕ್ಸಿ/ಗೂಡ್ಸ | 9.00 |
| 10 | ವೃತ್ತಿ ಪ್ರೋತ್ಸಾಹ | 12.00 |

ಕೊಲ್ಲಿ ರಾಷ್ಟ್ರದಿಂದ ಹಿಂತಿರುಗಿದವರಿಗೆ ಸಾಲ ಸೌಲಭ್ಯಕ್ಕೆ ರೂ.10.00ಲಕ್ಷಗಳನ್ನು ಮತ್ತು ಅಟೊ ಮೊಬೈಲ್ ತರಬೇತಿಗೆ ರೂ.2.50ಲಕ್ಷಗಳನ್ನು ಜಿಲ್ಲೆಗೆ ಅನುದಾನ ನಿಗಧಿಪಡಿಸಲಾಗಿದೆ.

....................3

| | | |
|---|---|---|
| | | **ಕರ್ನಾಟಕ ರಾಜ್ಯ ವಕ್ಫ್ ಮಂಡಳಿ**<br>2018-19ನೇ ಸಾಲಿನಲ್ಲಿ ಬಿಡುಗಡೆ ಮಾಡಲಾದ ಅನುದಾನದ ವಿವರ ಅನುಬಂಧ-1ರಲ್ಲಿ ನೀಡಲಾಗಿದೆ. |

ಕಡತ ಸಂಖ್ಯೆ: MWD 63 LMQ 2018

**(ಬಿ.ಜೆಡ್.ಜಮೀರ್ ಅಹ್ಮದ್ ಖಾನ್)**

ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು
ಹಾಗೂ ಗ್ರಾಹಕರ ವ್ಯವಹಾರಗಳು,
ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರು

L-A-ಪ್ರ.ಸಂ.444 ಕರ್ನಾಟಕ ರಾಜ್ಯ ವಕ್ಫ್ ಮಂಡಳಿ

## ಅನುಬಂಧ-1

ಕರ್ನಾಟಕ ರಾಜ್ಯದ ಎಲ್ಲಾ ಮಸೀದಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪೇಶ್ ಇಮಾಮ್ ಮತ್ತು ಮೌಜ್ಜಿನ್ ಗಳಿಗೆ ಗೌರವಧನದ ನೀಡುವಂತಹ ಯೋಜನೆಯು 2014-15 ಸಾಲಿನಿಂದ ಜಾರಿಯಲ್ಲಿದ್ದು ಜಿಲ್ಲಾ ಮಟ್ಟದ ಯೋಜನೆಯಾಗಿರುತ್ತದೆ.

ಬೆಳಗಾವಿ ಜಿಲ್ಲೆಯಲ್ಲಿ ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯಲ್ಲಿ ನೋಂದಾಯಿಸಲಾದ ಮಸೀದಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪೇಶ್ ಇಮಾಮ್ ಹಾಗೂ ಮೌಜ್ಜಿನ್ ಗಳಿಗೆ ಸರಕಾರದಿಂದ ಮಂಜೂರು ಮಾಡಲಾದ ಮಾಸಿಕ ಗೌರವಧನದ ತಾಲ್ಲೂಕುವಾರು ವಿವರ 2018-19 ನೇ ಸಾಲು.

2018-19 ಎಪ್ರೀಲ್ 2018 ರಿಂದ ಜೂನ್ 2018 ರವರೆಗೆ

| ಕ್ರಮ ಸಂ. | ಜಿಲ್ಲೆಯ ಹೆಸರು. | ಪೇಶ್ ಇಮಾಮ್ ಗಳು | ಪೇಶ್ ಇಮಾಮ್ ಗಳಿಗೆ ಮಂಜೂರು ಮಾಡಲಾದ ಹಣ | ಮೌಜ್ಜಿನ್‌ಗಳು | ಮೌಜ್ಜಿನ್‌ಗಳಿಗೆ ಮಂಜೂರು ಮಾಡಲಾದ ಹಣ | ಒಟ್ಟು ಮೊತ್ತ |
|---|---|---|---|---|---|---|
| 1 | ಬೆಳಗಾವಿ ಜಿಲ್ಲೆ | 263 | 63.12 | 251 | 45.18 | 108.30 |
| | ಒಟ್ಟು ಮೊತ್ತ | 263 | **63.12** | 251 | **45.18** | **108.30** |

2018-19 (ಹೊಸ ಪೇಶ್ ಇಮಾಮ್ ಮತ್ತು ಮೌಜ್ಜಿನ್‌ಗಳ ಅರ್ಜಿಗಳು ಕೇವಲ ಜೂನ್ ತಿಂಗಳಿಗೆ ಮಾತ್ರ)

| ಕ್ರಮ ಸಂ. | ಜಿಲ್ಲೆಯ ಹೆಸರು. | ಪೇಶ್ ಇಮಾಮ್ ಗಳು | ಪೇಶ್ ಇಮಾಮ್ ಗಳಿಗೆ ಮಂಜೂರು ಮಾಡಲಾದ ಹಣ | ಮೌಜ್ಜಿನ್‌ಗಳು | ಮೌಜ್ಜಿನ್‌ಗಳಿಗೆ ಮಂಜೂರು ಮಾಡಲಾದ ಹಣ | ಒಟ್ಟು ಮೊತ್ತ |
|---|---|---|---|---|---|---|
| 1 | ಬೆಳಗಾವಿ ಜಿಲ್ಲೆ | 25 | 1.00 | 27 | 0.81 | 1.81 |
| | ಒಟ್ಟು ಮೊತ್ತ | 25 | **1.00** | 27 | **0.81** | 1.81 |

2018-19 ಜುಲೈ 2018 ರಿಂದ ಸೆಪ್ಟೆಂಬರ್ 2018 ರವರೆಗೆ

| ಕ್ರಮ ಸಂ. | ಜಿಲ್ಲೆಯ ಹೆಸರು. | ಪೇಶ್ ಇಮಾಮ್ ಗಳು | ಪೇಶ್ ಇಮಾಮ್ ಗಳಿಗೆ ಮಂಜೂರು ಮಾಡಲಾದ ಹಣ | ಮೌಜ್ಜಿನ್‌ಗಳು | ಮೌಜ್ಜಿನ್‌ಗಳಿಗೆ ಮಂಜೂರು ಮಾಡಲಾದ ಹಣ | ಒಟ್ಟು ಮೊತ್ತ |
|---|---|---|---|---|---|---|
| 1 | ಬೆಳಗಾವಿ ಜಿಲ್ಲೆ | 288 | 69.12 | 278 | 50.04 | 119.16 |
| | ಒಟ್ಟು ಮೊತ್ತ | 288 | **69.12** | 278 | 50.04 | 119.16 |

ಅನುಬಂಧ-2

ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ

ಮಾನ್ ವಿಧಾನ ಸಭೆಯ ಸದಸ್ಯರಾದ ಶ್ರೀ. ಬಾಳಾಸಾಹೇಬ ಪಾಟೀಲ್ (ಕಾಗವಾಡ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 444 ಕ್ಕೆ ಅನುಬಂಧ

ಅ) ಬೆಳಗಾವಿ ಜಿಲ್ಲೆ ವ್ಯಾಪ್ತಿಗೆ ಬರುವ ಪ್ರತಿ ವಿಧಾನಸಭಾ ಕ್ಷೇತ್ರಗಳಿಗೆ ಬಿಡುಗಡೆ ಮಾಡಿರುವ ಅನುದಾನದ ವಿವರ (ಕ್ಷೇತ್ರವಾರು ಮಾಹಿತಿ)

(ರೂ.ಲಕ್ಷಗಳಲ್ಲಿ))

| ಕ್ರ.ಸಂ | ಲೆಕ್ಕಶೀರ್ಷಿಕೆ | ಬಿಡುಗಡೆಯಾದ ಅನುದಾನ | ಅಥಣಿ | ಕಾಗಾವಾಡ | ಬೆಳಗಾವಿ. (ಉ) | ಬೆಳಗಾವಿ. (ದ) | ಬೆಳಗಾವಿ. (ಗ್ರಾ) | ಬೈಲಹೊಂಗಲ | ಕಿತ್ತೂರು | ಚಿಕ್ಕೋಡಿ ಸದಲಗಾ | ನಿಪ್ಪಾಣಿ | ಹುಕ್ಕೇರಿ | ಯಮಕನಮರಡಿ | ಗೋಕಾಕ | ಅರಬಾವಿ | ರಾಯಬಾಗ | ಕುಡಚಿ | ರಾಮದುರ್ಗ | ಖಾನಾಪೂರ | ಸವದತ್ತಿ |
|---|---|---|---|---|---|---|---|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 |
| 1 | (103) 2225-03-277-2-48 ಸಮುದಾಯ ಭವನ/ಶಾದಿಮಹಲ್ ಯೋಜನೆ | 188.12 | 0 | 0 | 100.00 | 0 | 0 | 7.50 | 0.00 | 10.00 | 10.00 | 0 | 0 | 23.12 | 0 | 25.00 | 12.50 | 0 | 0 | 0 |
| 2 | 2225-03-277-2-82 (117) ಸಿಖ್ ಗುರುದ್ವಾರ ಯೋಜನೆ | 5.00 | 0 | 0 | 5.00 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
|  | ಜೈನ್ ದುರಸ್ತಿ/ಜೀರ್ಣೋದ್ಧಾರ | 35.00 | 10.00 | 0 | 0.00 | 0 | 0 | 0 | 0 | 0 | 25.00 | 0 | 0 | 0 | 0 | 0 | 0 | 0 | 0 | 0 |
|  | ಜೈನ್ ಬಿದಾಯಿ | 25.00 | 1.00 | 2.00 | 0.50 | 2.00 | 3.00 | 1.00 | 2.50 | 2.00 | 2.50 | 0.50 | 0.50 | 1.00 | 0.50 | 1.50 | 0.50 | - | 3.50 | 0.50 |
| 3 | 2225-03-102-0-14 (059) ಕ್ರಿಶ್ಚಿಯನ್ ಅಭಿವೃದ್ಧಿ ಯೋಜನೆ ಯಡಿ (ಅನಾಥಾಲಯ) | 11.40 | 0 | 0 | 0 | 11.40 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
|  | ಕ್ರಿಶ್ಚಿಯನ್ ಚರ್ಚ ದುರಸ್ತಿ/ ಜೀರ್ಣೋದ್ದಾರ/ನವೀಕರಣ | 17.00 | 0 | 0 | 0 | 0.00 | 14.00 | 0 | 0 | 0 | 0 | 0 | 0 | 0 | 0 | 0 | 0 | 0 | 3.00 | 0 |
|  | ಬಿದಾಯಿ | 2.00 | 0 | 0 | 0 | 0.50 | 0 | 0 | 0 | 0 | 0 | 0 | 0 | 0 | 0 | 0 | 0 | 0 | 1.50 | 0 |
| 4 | 2225-03-102-3-10 (103) ಮದರಸಾ ಯೋಜನೆ | 16.00 | 10.00 | 0 | 0 | 6.00 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| 5 | 2225-03-800-0-07 (059) ಮುಸ್ಲಿಂ ಬಿದಾಯಿ ಯೋಜನೆ | 193.00 | 2.50 | 1.00 | 34.50 | 12.50 | 10.50 | 14.50 | 14.50 | 18.50 | 4.00 | 4.00 | 5.00 | 21.00 | 6.00 | 2.00 | 9.00 | 3.00 | 17.00 | 13.50 |
| 6 | 2225-03-277-2-64(059) ವಸತಿ ಶಾಲೆಗಳ ನಿರ್ವಹಣೆ | 14.50 | 1.50 |  | 2.50 | 0.50 |  | 0.50 | 0 | 0 | 0 | 0.50 | 0 | 2.50 | 3.00 | 1.00 | 0 | 0 | 0 | 2.50 |
| 7 | 4225-03-277-2-10 (386) ಮಾನ್ಯ ಮುಖ್ಯಮಂತ್ರಿ ಅಭಿವೃದ್ಧಿಯೋಜನೆ | 450.00 | 25.00 | 25.00 | 25.00 | 25.00 | 25.00 | 25.00 | 25.00 | 25.00 | 25.00 | 25.00 | 25.00 | 25.00 | 25.00 | 25.00 | 25.00 | 25.00 | 25.00 | 25.00 |
| 8 | 2225-03-277-2-80(059 | 113.89 | 0 | 0 | 16.85 | 0 | 0 | 0 | 36.55 | 31.89 | 0 | 0 | 0 | 0 | 13.25 | 0 | 0 | 15.44 | 0 | 0 |
| 9 | 2225-03-277-2-91 (059) ವಿದ್ಯಾಸಿರಿ ಯೋಜನೆ | 166.95 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| 10 | 4225-03-277-2-10 (386) | 71.75 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |

| ಕ್ರಮ | ಲೆಕ್ಕಶೀರ್ಷಿಕೆ | ಬಿಡುಗಡೆಯಾದ ಅನುದಾನ | ಅಥಣಿ | ಕಾಗವಾಡ | ಬೆಳಗಾವಿ. (ಉ) | ಬೆಳಗಾವಿ. (ದ) | ಬೆಳಗಾವಿ. (ಗ್ರಾ) | ಬೈಲಹೊಂಗಲ | ಕಿತ್ತೂರು | ಚಿಕ್ಕೋಡಿ ಸದಲಗಾ | ನಿಪ್ಪಾಣಿ | ಹುಕ್ಕೇರಿ | ಯಮಕನಮರಡಿ | ಗೋಕಾಕ | ಅರಬಾವಿ | ರಾಯಬಾಗ | ಕುಡಚಿ | ರಾಮದುರ್ಗ | ಖಾನಾಪೂರ | ಸವದತ್ತಿ |
|---|---|---|---|---|---|---|---|---|---|---|---|---|---|---|---|---|---|---|---|---|
| | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 |
| 11 | 2225-03-001-0-03(059) ಮಾಹಿತಿ ಕೇಂದ್ರ | 47.51 | 4.95 | 0 | 4.53 | 0 | 0 | 4.95 | | 4.88 | 0 | 4.95 | 0 | 4.90 | 0 | 4.90 | 0 | 4.90 | 3.65 | 4.90 |
| 12 | 2225-03-277-2-80(041) ವಸತಿ ಶಾಲೆಗಳ ನಿರ್ವಹಣೆ | 0.30 | 0 | 0 | 0.10 | 0 | 0 | 0 | 0.10 | 0.10 | 0 | 0 | 0 | 0 | 0 | 0 | 0 | 0 | 0 | 0 |
| 13 | 2225-03-277-2-59(051) ವಸತಿ ಶಾಲೆಗಳ ನಿರ್ವಹಣೆ | 3.10 | 0 | 0 | 0.40 | 0 | 0 | 0 | 0.10 | 1.20 | | 0.30 | 0.10 | 0.20 | 0.10 | 0 | 0.20 | 0.20 | 0.20 | 0.10 |
| 14 | 2225-03-102-3-10(103) ವಸತಿ ಶಾಲೆಗಳ ನಿರ್ವಹಣೆ | 0.84 | 0 | 0 | 0.21 | 0 | 0 | - | 0.07 | | 0.07 | 0.07 | | 0.07 | | 0.07 | 0.07 | 0.07 | 0.07 | 0.07 |
| 15 | 2225-03-277-2-80(034) ವಸತಿ ಶಾಲೆಗಳ ನಿರ್ವಹಣೆ | 62.75 | 0 | 0 | 9.90 | 0 | 0 | 0 | 13.2 | 24.15 | 0 | 0 | 0 | 0 | 7.05 | 0 | | 8.45 | 0 | 0 |
| 16 | 2225-03-277-2-64(059) | 46.40 | 0 | 0 | 7.40 | 0 | 0 | 0 | 2.80 | 5.60 | 0 | 5.50 | 3.80 | 3.70 | 2.80 | 0 | 3.70 | 3.70 | 3.70 | 3.70 |
| | 2225-03-277-2-80(059) (ಅಲ್ಪಸಂಖ್ಯಾತರ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ನಿರ್ವಹಣೆ. | 114.03 | 0 | 0 | 16.85 | 0 | 0 | 0 | 36.55 | 31.89 | 0 | 0 | 0 | 0 | 13.25 | 0 | 0 | 15.49 | 0 | 0 |
| 18 | 4225-03-277-2-03(386) | 47.90 | 27.50 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 20.40 |
| | ಒಟ್ಟು | **1632.44** | **82.45** | **28.00** | **223.74** | **57.90** | **52.50** | **53.45** | **131.37** | **155.21** | **66.57** | **40.82** | **34.40** | **81.49** | **70.95** | **59.47** | **50.97** | **76.25** | **57.62** | **70.67** |

ನಿರ್ದೇಶಕರು,
ಅಲ್ಪಸಂಖ್ಯಾತರ ನಿರ್ದೇಶನಾಲಯ,
ಬೆಂಗಳೂರು.

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 1323 |
| ವಿಧಾನ ಸಭೆ ಸದಸ್ಯರ ಹೆಸರು : | ಶ್ರೀ ನಾಗನಗೌಡ ಕುಂದಕೂರ್ |
| ಉತ್ತರಿಸಬೇಕಾದ ದಿನಾಂಕ : | 12.12.2018 |
| ಉತ್ತರಿಸುವ ಸಚಿವರು : | ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಬಿಪಿಎಲ್ ಪಡಿತರ ಚೀಟಿಗಳನ್ನು ಹೊಂದಿರುವ ಫಲಾನುಭವಿಗಳು ಪಡಿತರ ಪದಾರ್ಥಗಳನ್ನು ಪಡೆಯಲು ರೂಪಿಸಿರುವ ಬಯೋಮೆಟ್ರಿಕ್ ವ್ಯವಸ್ಥೆಯಿಂದ ಆಹಾರ ಪದಾರ್ಥಗಳನ್ನು ಪಡೆಯಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದಯೇ; | ರಾಜ್ಯದಲ್ಲಿ 20,027 ನ್ಯಾಯಬೆಲೆ ಅಂಗಡಿಗಳಿವೆ, ಈ ನ್ಯಾಯಬೆಲೆ ಅಂಗಡಿಗಳ ಪೈಕಿ ಇದುವರೆಗೆ 18,964 ನ್ಯಾಯಬೆಲೆ ಅಂಗಡಿಗಳನ್ನು ಪಿಓಎಸ್ ನ್ಯಾಯಬೆಲೆ ಅಂಗಡಿಗಳಾಗಿ ಪರಿವರ್ತಿಸಲಾಗಿದೆ. ಪಿಓಎಸ್ ಮೂಲಕ ಪಡಿತರ ಹಂಚಿಕೆಯಲ್ಲಿ ಇದುವರೆಗೂ ಯಾವುದೇ ಸಮಸ್ಯೆಗಳು ಇರುವುದಿಲ್ಲ, ಪಡಿತರ ವಿತರಣೆಯಲ್ಲಿ ಸಂಪೂರ್ಣ ಪಾರದರ್ಶಕತೆ ಜಾರಿಗೊಳಿಸಲಾಗಿದೆ. ಪ್ರತಿ ಮಾಹೆ ಅಂದಾಜು 1.05 ಕೋಟಿ ಫಲಾನುಭವಿ ಕುಟುಂಬಗಳು ಬಯೋಮೆಟ್ರಿಕ್ ಮೂಲಕವೇ ಪಡಿತರ ಪಡೆಯುತ್ತಿದ್ದಾರೆ. |
| ಆ) | ಹಾಗಿದ್ದಲ್ಲಿ, ಬಯೋಮೆಟ್ರಿಕ್ ವ್ಯವಸ್ಥೆಯನ್ನು ಸುಲಭಗೊಳಿಸಿ, ಪಡಿತರ ಪದಾರ್ಥಗಳನ್ನು ಸಮರ್ಪಕವಾಗಿ ವಿತರಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ; | ಈಗಾಗಲೇ ವ್ಯವಸ್ಥೆಯನ್ನು ಸುಲಭಗೊಳಿಸಲಾಗಿದೆ. |
| ಇ) | ಗ್ರಾಮೀಣ ಪ್ರದೇಶದಲ್ಲಿ ವಿದ್ಯುತ್ ಮತ್ತು ಇಂಟರ್‌ನೆಟ್ ವ್ಯವಸ್ಥೆಯು ಅಸಮರ್ಪಕವಾಗಿರುವುದರಿಂದ ಪಡಿತರ ಚೀಟಿ ಹೊಂದಿರುವ ಫಲಾನುಭವಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಯೋಮೆಟ್ರಿಕ್ ವ್ಯವಸ್ಥೆಯಲ್ಲಿ ಲ್ಯಾಪ್ ಟಾಪ್, ಟ್ಯಾಬ್ಲೆಟ್ ಹಾಗೂ ಮೊಬೈಲ್ ಫೋನ್‌ಗಳನ್ನು ಬಳಕೆ ಮಾಡಿ ಪಡಿತರ ವಿತರಿಸುತ್ತಿರುವುದರಿಂದ ವಿದ್ಯುತ್ ಸಮಸ್ಯೆ ಹಾಗೂ ಇಂಟರ್ ನೆಟ್ ಸಮಸ್ಯೆ ಉದ್ಭವಿಸುವುದಿಲ್ಲ. ರಾಜ್ಯದ 18,964 ನ್ಯಾಯಬೆಲೆ ಅಂಗಡಿಗಳಲ್ಲಿ ಈಗಾಗಲೇ ಬಯೋಮೆಟ್ರಿಕ್ ವ್ಯವಸ್ಥೆ ಜಾರಿಯಲ್ಲಿದೆ. |
| ಈ) | ಹಾಗಿದ್ದಲ್ಲಿ, ಬಯೋಮೆಟ್ರಿಕ್ ವ್ಯವಸ್ಥೆಯನ್ನು ರದ್ದುಗೊಳಿಸಿ, ಈ ಹಿಂದೆ ಇದ್ದ ಪದ್ಧತಿಯನ್ನೇ ಜಾರಿಗೊಳಿಸಲು ಸರ್ಕಾರಕ್ಕಿರುವ ತೊಂದರೆಗಳೇನು; (ಮಾಹಿತಿ ನೀಡುವುದು) | ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ 2013 ನ್ನು ರಾಜ್ಯದಲ್ಲಿ ಜಾರಿಗೊಳಿಸಿದೆ. ಕಾಯ್ದೆಯಲ್ಲಿ ಪಾರದರ್ಶಕತೆಯನ್ನು ಕಡ್ಡಾಯಗೊಳಿಸಲಾಗಿದೆ. ಬಯೋಮೆಟ್ರಿಕ್ ವ್ಯವಸ್ಥೆಯಿಂದ ಪಾರದರ್ಶಕತೆಯನ್ನು ಕಾಯ್ದು ಕೊಳ್ಳಲು ಸಾಧ್ಯವಿರುವುದರಿಂದ ಹಿಂದೆ ಇದ್ದ ಪದ್ಧತಿ ಜಾರಿಗೊಳಿಸಲು ಸಾಧ್ಯವಿಲ್ಲ. |
| ಉ) | ರಾಜ್ಯದಲ್ಲಿರುವ ಸರ್ಕಾರಿ ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆ ಅವಧಿ ಎಷ್ಟು; ನ್ಯಾಯಬೆಲೆ ಅಂಗಡಿಗಳು ಪ್ರತಿ ಮಾಹೆಯಲ್ಲಿ ಎಷ್ಟು ದಿನಗಳು ಯಾವ ಸಮಯದಲ್ಲಿ ತೆರೆಯಬೇಕು; | ರಾಜ್ಯದಲ್ಲಿ ನ್ಯಾಯಬೆಲೆ ಅಂಗಡಿಗಳು ಕಾರ್ಯನಿರ್ವಹಿಸುವ ಎಲ್ಲಾ ದಿನಗಳಲ್ಲೂ ಕಾರ್ಯನಿರ್ವಹಿಸುವ (ಪ್ರತಿ ಮಂಗಳವಾರ ಮತ್ತು ರಾಜ್ಯ ಸರ್ಕಾರದ ಇತರೇ ರಜಾ ದಿನಗಳನ್ನು ಹೊರತುಪಡಿಸಿ)ಅವಧಿಯನ್ನು ಬೆಳಿಗ್ಗೆ 07.00 ರಿಂದ ಮಧ್ಯಾಹ್ನ 12.00 ಗಂಟೆವರೆಗೆ ಮತ್ತು ಸಂಜೆ 04.00 ರಿಂದ 08.00 ಗಂಟೆಯವರೆಗೂ ತಪ್ಪದೇ ತೆರೆಯಲು ನಿರ್ದಿಷ್ಟ ಸೂಚನೆ ನೀಡಲಾಗಿದೆ. |

| | | |
|---|---|---|
| ಊ) | ಸರ್ಕಾರಿ ನ್ಯಾಯಬೆಲೆ ಅಂಗಡಿಗಳು ಹಗಲು ವೇಳೆಯಲ್ಲಿ ಬಾಗಿಲು ಮುಚ್ಚಿರುವುದರಿಂದ ಪಡಿತರವನ್ನು ಪಡೆಯಲು ಫಲಾನುಭವಿಗಳಿಗೆ ತೊಂದರೆಯಾಗುತ್ತಿರುವುದು ನಿಜವೇ; ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳುವುದೇ? | ನ್ಯಾಯಬೆಲೆ ಅಂಗಡಿಗಳು ಕಡ್ಡಾಯವಾಗಿ ನಿರ್ದಿಷ್ಟ ಪಡಿಸಿದ ವಿತರಣಾ ಸಮಯದಲ್ಲಿ ಪಡಿತರ ಚೀಟಿದಾರರು ಅಥವಾ ಕುಟುಂಬದ ಸದಸ್ಯರಿಗೆ ಪಡಿತರ ಪದಾರ್ಥ ವಿತರಣೆ ವ್ಯವಸ್ಥೆ ಮಾಡತಕ್ಕದ್ದು. ಒಂದು ವೇಳೆ ಅವರು ಪಾಲನೆ ಮಾಡದೇ ಇರುವುದು ಕಂಡುಬಂದಲ್ಲಿ ಕರ್ನಾಟಕ ಅಗತ್ಯ ವಸ್ತುಗಳ (ಸಾರ್ವಜನಿಕ ವಿತರಣೆ ಪದ್ಧತಿ) ನಿಯಂತ್ರಣ ಆದೇಶ 2016ರ ನಿಯಮದಂತೆ ಕ್ರಮ ಜರುಗಿಸಲಾಗುವುದು.<br>ಈ ಬಗ್ಗೆ ದತ್ತಾಂಶದಲ್ಲಿ ನ್ಯಾಯಬೆಲೆ ಅಂಗಡಿಗಳು ಎಷ್ಟು ಸಮಯ ಅಂಗಡಿ ತೆರೆಯಲಾಗಿದೆ ಎಂಬ ಮಾಹಿತಿ ಲಭ್ಯವಿದ್ದು ಅದರ ಸಹಾಯದಿಂದ ಅಂಗಡಿಗಳ ಮೇಲ್ವಿಚಾರಣೆ ಮಾಡಲಾಗುತ್ತಿದೆ. |

ಆನಾಸ 249 ಡಿಆರ್‌ಎ 2018

(ಬಿ. ಜೆಡ್. ಜಮೀರ್ ಅಹ್ಮದ್ ಖಾನ್)
ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು
ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ : 366
2. ಸದಸ್ಯರ ಹೆಸರು : ಶ್ರೀ ಸಿದ್ದು ಸವದಿ (ತೇರದಾಳ)
3. ಉತ್ತರಿಸಬೇಕಾದ ದಿನಾಂಕ : 12-12-2018.
4. ಉತ್ತರಿಸುವ ಸಚಿವರು : ಮಾನ್ಯ ವಸತಿ ಮತ್ತು ನಗರಾಭಿವೃದ್ಧಿ ಸಚಿವರು

| ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತೇರದಾಳ ವಿಧಾನಸಭಾ ಕ್ಷೇತ್ರದಲ್ಲಿರುವ ರಬಕವಿ-ಬನಹಟ್ಟಿ ನಗರಸಭೆ ವ್ಯಾಪ್ತಿಯಲ್ಲಿ ಒಳಚರಂಡಿ ಕಾಮಗಾರಿ ಪ್ರಾರಂಭವಾಗಿ ಅರ್ಧಕ್ಕೆ ನಿಂತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಉಳಿದ ಅರ್ಧ ಕಾಮಗಾರಿ ಯಾವಾಗ ಪ್ರಾರಂಭವಾಗುವುದು. | ಏಷ್ಯಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮದಡಿ (ಎನ್‌ಕೆಯುಎಸ್‌ಐಪಿ) ರಬಕವಿ-ಬನಹಟ್ಟಿ ನಗರಸಭೆ ವ್ಯಾಪ್ತಿಯಲ್ಲಿ ಒಳಚರಂಡಿ ಕಾಮಗಾರಿ ಕೈಗೊಂಡಿದ್ದು, ಗುತ್ತಿಗೆದಾರರ **ನಿರ್ಲಕ್ಷತನದಿಂದ ಹಾಗೂ ನಿಧಾನಗತಿ ದೋರಣೆಯಿಂದ** ದಿನಾಂಕ:16/04/2013 ರಂದು ಗುತ್ತಿಗೆಯನ್ನು ರದ್ದುಪಡಿಸಲಾಯಿತು. ಆದ್ದರಿಂದ, ಸದರಿ ಅವಧಿಯಲ್ಲಿ ಕಾಮಗಾರಿಗಳು ಅರ್ಧಕ್ಕೆ ನಿಂತಿತ್ತು.<br><br>ನಂತರ ಮರು ಟೆಂಡರ್ ಕರೆದು ಗುತ್ತಿಗೆಯನ್ನು ಮೆ//ಅಕ್ವಾಟೆಕ್ ಲಕ್ಷ್ಮೀ (ಜೆ.ವಿ) ಇವರಿಗೆ ರೂ.42.64 ಕೋಟಿಗಳಿಗೆ ದಿನಾಂಕ 30/11/2015 ರಂದು ಗುತ್ತಿಗೆ ನೀಡಲಾಗಿದ್ದು, ಕಾಮಗಾರಿಯು ಪ್ರಗತಿಯಲ್ಲಿದೆ.<br><br>ಇಲ್ಲಿಯವರೆಗೆ 40.43 ಕಿ.ಮೀ ಪೈಪ್ ಲೇನ್ ಕಾಮಗಾರಿಯಲ್ಲಿ 37.80 ಕಿ.ಮೀ ಪೈಪ್ ಲೇನ್ ಕಾಮಗಾರಿ ಮುಕ್ತಾಯಗೊಂಡಿದೆ. ಬಾಕಿ 2.62 ಕಿ.ಮೀ ಪೈಪ್ ಲೇನ್ ಪ್ರಗತಿಯಲ್ಲಿರುತ್ತದೆ.<br><br>ತ್ಯಾಜ್ಯ ನೀರು ಸಂಸ್ಕರಣ ಘಟಕದ ಕಾಮಗಾರಿಗಳು ಪ್ರಗತಿಯಲ್ಲಿದ್ದು, ಇಲ್ಲಿಯವರೆಗೆ ಶೇ.67% ಕಾಮಗಾರಿ ಮುಕ್ತಾಯಗೊಂಡಿರುತ್ತದೆ.<br><br>ಬಾಕಿ ಉಳಿದ ಕಾಮಗಾರಿಗಳನ್ನು ಮಾರ್ಚ್-2019 ರೊಳಗೆ ಪೂರ್ಣಗೊಳಿಸಲು ಕ್ರಮವಹಿಸಲಾಗಿದೆ. |
| ಆ) | ತೇರದಾಳ ಮತ್ತು ಮಹಾಲಿಂಗಪೂರ ಪುರಸಭೆ ವ್ಯಾಪ್ತಿಯಲ್ಲಿ ಬಹಳ ದಿನಗಳಿಂದ ಒಳಚರಂಡಿ ವ್ಯವಸ್ಥೆಗೆ ಬೇಡಿಕೆ ಇದ್ದು, ಯಾವಾಗ ಮಂಜೂರಾತಿ ಕೊಡಲಾಗುವುದು; ಮಂಜೂರು ಮಾಡಲು ಕೈಗೊಂಡ ಕ್ರಮಗಳೇನು? (ವಿವರ ಒದಗಿಸುವುದು) | ತೇರದಾಳ ಪಟ್ಟಣ ಮತ್ತು ಮಹಾಲಿಂಗಪುರ ಪಟ್ಟಣಗಳಿಗೆ ಒಳಚರಂಡಿ ವ್ಯವಸ್ಥೆ ಒದಗಿಸುವ ಕುರಿತು ಸ್ಥಳೀಯ ಸಂಸ್ಥೆಯಿಂದ ಯಾವುದೇ ಬೇಡಿಕೆ ಬಂದಿರುವುದಿಲ್ಲ. |

ನಅಇ 419 ಪಿಆರ್‌ಜೆ 2018

(ಯು.ಟಿ. ಖಾದರ್)
ನಗರಾಭಿವೃದ್ಧಿ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 366
ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಸಿದ್ದು ಸವದಿ (ತೇರದಾಳ)
ಉತ್ತರಿಸಬೇಕಾದ ದಿನಾಂಕ : 12.12.2018
ಉತ್ತರಿಸಬೇಕಾದವರು : ಮಾನ್ಯ ನಗರಾಭಿವೃದ್ಧಿ ಹಾಗೂ ವಸತಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ತೇರದಾಳ ವಿಧಾನಸಭಾ ಕ್ಷೇತ್ರದಲ್ಲಿರುವ ರಬಕವಿ-ಬನಹಟ್ಟಿ ನಗರಸಭೆ ವ್ಯಾಪ್ತಿಯಲ್ಲಿ ಒಳಚರಂಡಿ ಕಾಮಗಾರಿ ಪ್ರಾರಂಭವಾಗಿ ಅರ್ಧಕ್ಕೆ ನಿಂತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಉಳಿದ ಅರ್ಧ ಕಾಮಗಾರಿ ಯಾವಾಗ ಪ್ರಾರಂಭವಾಗುವುದು | ಏಷ್ಯಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮದಡಿ (ಎನ್‌ಕೆಯುಎಸ್‌ಐಪಿ) ರಬಕವಿ-ಬನಹಟ್ಟಿ ನಗರಸಭೆ ವ್ಯಾಪ್ತಿಯಲ್ಲಿ ಒಳಚರಂಡಿ ಕಾಮಗಾರಿ ಕೈಗೊಂಡಿದ್ದು, ಗುತ್ತಿಗೆದಾರರ ನಿಧಾನಗತಿದೋರಣೆಯಿಂದ ದಿನಾಂಕ 16.04.2013 ರಂದು ಗುತ್ತಿಗೆಯನ್ನು ರದ್ದುಪಡಿಸಲಾಯಿತು. ಆದ್ದರಿಂದ ಸದರಿ ಅವಧಿಯಲ್ಲಿ ಕಾಮಗಾರಿಗಳು ಅರ್ಧಕ್ಕೆ ನಿಂತಿತ್ತು.<br><br>ನಂತರ ಮರು ಟೆಂಡರ್ ಕರೆದು ಗುತ್ತಿಗೆಯನ್ನು ಮೆ//ಅಕ್ವಾಟೆಕ್ ಲಕ್ಷ್ಮೀ (ಜೆ.ವಿ) ಇವರಿಗೆ ರೂ.42.64 ಕೋಟಿಗಳಿಗೆ ದಿನಾಂಕ 30.11.2015 ರಂದು ಗುತ್ತಿಗೆ ನೀಡಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. ಇಲ್ಲಿಯವರೆಗೆ 40.43 ಕಿ.ಮೀ ಪೈಪ್ ಲೇನ್ ಕಾಮಗಾರಿಯಲ್ಲಿ 37.80 ಕಿ.ಮೀ ಪೈಪ್ ಲೇನ್ ಕಾಮಗಾರಿ ಮುಕ್ತಾಯಗೊಂಡಿದ್ದು, ಬಾಕಿ 2.62 ಕಿ.ಮೀ ಪೈಪ್ ಲೇನ್ ಪ್ರಗತಿಯಲ್ಲಿರುತ್ತದೆ.<br><br>ತ್ಯಾಜ್ಯ ನೀರು ಸಂಸ್ಕರಣ ಘಟಕದ ಕಾಮಗಾರಿಗಳು ಪ್ರಗತಿಯಲ್ಲಿದ್ದು, ಇಲ್ಲಿಯವರೆಗೆ ಶೇ.67 ರಷ್ಟು ಕಾಮಗಾರಿ ಮುಕ್ತಾಯಗೊಂಡಿರುತ್ತದೆ. ಬಾಕಿ ಉಳಿದ ಕಾಮಗಾರಿಗಳನ್ನು ಶೀಘ್ರವಾಗಿ ಪೂರ್ಣಗೊಳಿಸಲು ಉದ್ದೇಶಿಸಲಾಗಿದೆ. |
| ಆ | ತೇರದಾಳ ಮತ್ತು ಮಹಾಲಿಂಗಪೂರ ಪುರಸಭೆ ವ್ಯಾಪ್ತಿಯಲ್ಲಿ ಬಹಳ ದಿನಗಳಿಂದ ಒಳಚರಂಡಿ ವ್ಯವಸ್ಥೆ ಬೇಡಿಕೆ ಇದ್ದು, ಯಾವಾಗ ಮಂಜೂರಾತಿ ಕೊಡಲಾಗುವುದು; ಮಂಜೂರು ಮಾಡಲು ಕೈಗೊಂಡ ಕ್ರಮಗಳೇನು? (ವಿವರ ಒದಗಿಸುವುದು). | ತೇರದಾಳ ಪಟ್ಟಣ ಮತ್ತು ಮಹಾಲಿಂಗಪುರ ಪಟ್ಟಣಗಳಿಗೆ ಒಳಚರಂಡಿ ವ್ಯವಸ್ಥೆ ಕುರಿತು ಸ್ಥಳೀಯ ಸಂಸ್ಥೆಯಿಂದ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಯಾವುದೇ ಪ್ರಸ್ತಾವನೆ ಬಂದಿರುವುದಿಲ್ಲ. |

**ಸಂಖ್ಯೆ: ನಅಇ 67 ಯುಡಬ್ಲ್ಯೂಎಲ್ 2018**

(ಯು.ಟಿ.ಖಾದರ್)
ನಗರಾಭಿವೃದ್ಧಿ ಹಾಗೂ ವಸತಿ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 838 |
| ಸದಸ್ಯರ ಹೆಸರು | : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) |
| ಉತ್ತರಿಸಬೇಕಾದ ದಿನಾಂಕ | : 12-12-2018 |
| ಉತ್ತರಿಸುವ ಸಚಿವರು | : ಮಾನ್ಯ ಪೌರಾಡಳಿತ, ಸ್ಥಳೀಯ ಸಂಸ್ಥೆಗಳು ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು. |

| ಪ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಇಂಡಿ ಪುರಸಭೆಯ ವ್ಯಾಪ್ತಿಯಲ್ಲಿ ವ್ಯಾಪಾರಸ್ಥರಿಗೆ ಅನುಕೂಲವಾಗುವಂತೆ ಹಾಗೂ ಪುರಸಭೆಗೆ ನಿರ್ದಿಷ್ಟ ಆದಾಯ ಬರುವಂತೆ ಮೆಗಾ ಮಾರ್ಕೆಟ್ ಕಟ್ಟಡ ನಿರ್ಮಾಣ ಮಾಡಲು ಎಸ್.ಎಫ್.ಸಿ ಅನುದಾನ ಕೋರಿ ಪ್ರಸ್ತಾವನೆ ಸರ್ಕಾರಕ್ಕೆ ಬಂದಿರುವುದು ನಿಜವೇ; ಬಂದಿದ್ದಲ್ಲಿ, ಅದರ ರೂಪುರೇಷೆಗಳೇನು (ವಿವರ ನೀಡುವುದು) | ಇಂಡಿ ಪುರಸಭೆಯ ವ್ಯಾಪ್ತಿಯಲ್ಲಿ ಮೂಲಭೂತ ಸೌಕರ್ಯವನ್ನು ಕಲ್ಪಿಸಲು ರಾಜ್ಯ ಸರ್ಕಾರವು ಈ ಕೆಳಕಂಡ ಅನುದಾನವನ್ನು ಮಂಜೂರು ಮಾಡಲಾಗಿರುತ್ತದೆ. (ರೂ.ಲಕ್ಷಗಳಲ್ಲಿ) [see table below] ಮೇಲ್ಕಂಡ ಅನುದಾನಗಳಡಿ ಪುರಸಭೆಯ ವ್ಯಾಪ್ತಿಯಲ್ಲಿ ಅಗತ್ಯವಿರುವ ಕಟ್ಟಡ ಕಾಮಗಾರಿಗಳನ್ನು ಕೈಗೊಳ್ಳಲು ಮಾರ್ಗಸೂಚಿಗಳಲ್ಲಿ ಅವಕಾಶ ಕಲ್ಪಿಸಲಾಗಿದೆ.<br><br>ಮುಂದುವರೆದು, ಇಂಡಿ ಪುರಸಭೆ ವ್ಯಾಪ್ತಿಯಲ್ಲಿ ಮೆಗಾ ಮಾರುಕಟ್ಟೆ ನಿರ್ಮಿಸಲು ರೂ.10.00 ಕೋಟಿಗಳ ಎಸ್.ಎಫ್.ಸಿ ವಿಶೇಷ ಅನುದಾನ ಮಂಜೂರು ಮಾಡಲು ಕೋರಿ, ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ. ಆದರೆ, ಎಸ್‌ಎಫ್‌ಸಿ ವಿಶೇಷ ಅನುದಾನ ತೀವ್ರ ಕೊರತೆಯಲ್ಲಿರುವುದರಿಂದ ಪ್ರಸ್ತಾವನೆಯನ್ನು ಪರಿಗಣಿಸಲು ಕಷ್ಟಸಾಧ್ಯವಾಗಿರುತ್ತದೆ. |
| ಆ) | ಇಂಡಿ ಪಟ್ಟಣದಲ್ಲಿ ಮೆಗಾ ಮಾರ್ಕೆಟ್ ಕಟ್ಟಡ ನಿರ್ಮಾಣ ಮಾಡಿ ವ್ಯಾಪಾರಸ್ಥರಿಗೆ ಹಾಗೂ ಪುರಸಭೆಗೆ ಆದಾಯ ಬರುವಂತೆ ಮಾಡಲು ಸರ್ಕಾರ ಆಸಕ್ತಿ ಹೊಂದಿದೆಯೇ; | ಸರ್ಕಾರದಿಂದ ನೀಡುತ್ತಿರುವ ಅನುದಾನ & ಸ್ಥಳೀಯ ಸಂಸ್ಥೆಯು ತನ್ನ ಸ್ವಂತ ನಿಧಿಯಿಂದ ಸಂಪನ್ಮೂಲಗಳನ್ನು ಕ್ರೋಢೀಕರಿಸಿ ಅಗತ್ಯವಿರುವ ಮಾರ್ಕೇಟ್‌ನ್ನು ನಿರ್ಮಾಣ ಮಾಡಲು ಅವಕಾಶವಿರುತ್ತದೆ. |
| ಇ) | ಹೊಂದಿದ್ದಲ್ಲಿ, ರೂ 10.00 ಕೋಟಿ ಎಸ್.ಎಫ್.ಸಿ ಅನುದಾನ ಮಂಜೂರು ಮಾಡಲಾಗುವುದೇ; | |
| ಈ) | ಯಾವಾಗ ಎಷ್ಟು ಅನುದಾನ ಒದಗಿಸಲಾಗುವುದು (ವಿವರ ನೀಡುವುದು)? | |

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆ | ಮಂಜೂರು ಮಾಡಿರುವ ಅನುದಾನ |
|---|---|---|
| 1. | ಎಸ್‌ಎಫ್‌ಸಿ ಮುಕ್ತನಿಧಿ (2018-19) | 179.00 |
| 2. | 14ನೇ ಹಣಕಾಸು ಆಯೋಗ (2018-19) | 198.73 |
| 3. | ನಗರೋತ್ಥಾನ (ಮುನಿಸಿಪಾಲಿಟಿಸ್) ಹಂತ-3 | 750.00 |
| | ಒಟ್ಟು | 1127.73 |

ಸಂಖ್ಯೆ: ನಅಇ 253 ಎಸ್‌ಎಫ್‌ಸಿ 2018.

(ರಮೇಶ ಲ. ಜಾರಕಿಹೊಳಿ)
ಪೌರಾಡಳಿತ, ಸ್ಥಳೀಯ ಸಂಸ್ಥೆಗಳು ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 339
ಸದಸ್ಯರ ಹೆಸರು : ಶ್ರೀ ಸಿ. ಟಿ. ರವಿ (ಚಿಕ್ಕಮಗಳೂರು)
ಉತ್ತರಿಸಬೇಕಾದ ದಿನಾಂಕ : 12-12-2018
ಉತ್ತರಿಸುವ ಸಚಿವರು : ಮಾನ್ಯ ವಸತಿ ಮತ್ತು ನಗರಾಭಿವೃದ್ಧಿ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಮಗಳೂರು. ನಗರಕ್ಕೆ 24X7 ಕುಡಿಯುವ ನೀರು ಸರಬರಾಜು ಮಾಡುವ ಅಮೃತ್. ಯೋಜನೆ ಯಾವಾಗ ಮಂಜೂರಾಗಿರುತ್ತದೆ: ಈ ಯೋಜನೆಯ ಅಂದಾಜು ಮೊತ್ತ ಎಷ್ಟು: | ಚಿಕ್ಕಮಗಳೂರು ನಗರಕ್ಕೆ 'ಅಮೃತ್' ಯೋಜನೆಯಡಿ 24x7 ಕುಡಿಯುವ ನೀರು ಸರಬರಾಜು ಮಾಡುವ ಯೋಜನೆ ದಿನಾಂಕ:27-01-2016 ರಂದು ಮಂಜೂರಾಗಿರುತ್ತದೆ. ಸದರಿ ಯೋಜನೆಯ ಅಂದಾಜು ಮೊತ್ತ ರೂ.102.57 ಕೋಟಿಗಳಾಗಿರುತ್ತದೆ. |
| ಆ) | ಈ ಯೋಜನೆಯಡಿ ಯಾವ ಯಾವ ಕಾಮಗಾರಿ ನಿರ್ವಹಿಸಲಾಗುತ್ತಿದೆ: ಈ ಯೋಜನೆಗೆ ಅಗತ್ಯವಿರುವ ನೀರನ್ನು ಯಗಚಿ ಅಣೆಕಟ್ಟೆಯಿಂದ ಬಳಸಿಕೊಳ್ಳಲು ಸಂಬಂಧಪಟ್ಟ ಇಲಾಖೆಯಿಂದ ಅನುಮತಿ ಪಡೆಯಲಾಗಿದೆಯೇ: (ವಿವರ ನೀಡುವುದು) | ಸದರಿ ಯೋಜನೆಯಡಿ ಈ ಕೆಳಕಂಡ ಕಾಮಗಾರಿಗಳನ್ನು ನಿರ್ವಹಿಸಲಾಗುತ್ತಿದೆ:<br>1) ಬೇಲೂರು ಜಾಕ್‌ವೆಲ್‌ನಿಂದ ಮಧ್ಯಂತರ ಪಂಪು ಮನೆವರೆಗೆ ಹಾಲಿ ಇರುವ ಪಿ.ಎಸ್.ಸಿ ಕೊಳವೆಗಳನ್ನು ಬದಲಿಸಿ ಎಂ.ಎಸ್ ಏರು ಕೊಳವೆ ಮಾರ್ಗ ಅಳವಡಿಸುವುದು – 12.25 ಕಿ.ಮೀ<br>2) ಮಧ್ಯಂತರ ಪಂಪು ಮನೆಯಿಂದ ಕೆ.ಹೆಚ್.ಬಿ ಬಳಿ ಇರುವ ಜಲ ಶುದ್ಧೀಕರಣ ಘಟಕದವರೆಗೆ ಹಾಲಿ ಇರುವ ಪಿ.ಎಸ್.ಸಿ ಕೊಳವೆಗಳನ್ನು ಬದಲಿಸಿ ಎಂ.ಎಸ್ ಏರು ಕೊಳವೆ ಮಾರ್ಗ ಅಳವಡಿಸುವುದು–3.631 ಕಿ.ಮೀ.<br>3)ಜಾಕ್‌ವೆಲ್. ಮಧ್ಯಂತರ ಪಂಪು ಮನೆ ಹಾಗೂ ಜಲ ಶುದ್ಧೀಕರಣಗಾರದಲ್ಲಿ ಹಾಲಿ ಇರುವ ಪಂಪುಗಳನ್ನು ಬದಲಾಯಿಸಿ ಹೆಚ್ಚಿನ ಸಾಮರ್ಥ್ಯದ ಪಂಪುಗಳನ್ನು ಅಳವಡಿಸುವುದು.<br>4)ಬೇಲೂರು ಜಾಕ್‌ವೆಲ್ ಬಳಿ Switch Gear Room ನಿರ್ಮಾಣ.<br>5) ಮಧ್ಯಂತರ ಪಂಪು ಮನೆ ಬಳಿ Switch Gear Room ನಿರ್ಮಾಣ.<br>6)ಆಶಾ ಕಿರಣ ಅಂಧ ಮಕ್ಕಳ ಶಾಲೆಯ ಹತ್ತಿರ 5 ಲ.ಲೀ ಸಾಮರ್ಥ್ಯದ ನೆಲಮಟ್ಟದ ಜಲಸಂಗ್ರಹಗಾರ<br>7) ಜೈಲು ಆವರಣದಲ್ಲಿ 12ಲ.ಲೀ ಸಾಮರ್ಥ್ಯದ ನೆಲಮಟ್ಟದ ಜಲಸಂಗ್ರಹಗಾರ.<br>8) ಕೆ.ಹೆಚ್.ಬಿ ಕಾಲೋನಿ ಬಳಿ 60ಲ.ಲೀ ಸಾಮರ್ಥ್ಯದ ನೆಲಮಟ್ಟದ ಜಲಸಂಗ್ರಹಗಾರ.<br>9) ಕೆ.ಹೆಚ್.ಬಿ ಕಾಲೋನಿ ಬಳಿ 22.50 ಎಂ.ಎಲ್.ಡಿ ಸಾಮರ್ಥ್ಯದ ಜಲ ಶುದ್ಧೀಕರಣಗಾರದ ನವೀಕರಣ.<br>10) ರತ್ನಗಿರಿ ಬೋರೆ ಬಳಿ 4.54 ಎಂ.ಎಲ್.ಡಿ ಸಾಮರ್ಥ್ಯದ ಜಲ ಶುದ್ಧೀಕರಣಗಾರದ ನವೀಕರಣ.<br>11) ಹೆಚ್.ಡಿ.ಪಿ ಈ ಕೊಳವೆ/ಡಿ.ಐ ವಿತರಣಾ ಮಾರ್ಗ ಅಳವಡಿಸುವುದು –312 ಕಿ.ಮೀ.<br>12) ಜಲಸಂಗ್ರಹಗಾರಗಳಿಗೆ ಫೀಡರ್ ಕೊಳವೆಗಳು– 20.83 ಕಿ.ಮೀ. |

| | | |
|---|---|---|
| | | ಹಾಲಿ ಯೋಜನೆಯನ್ನು 22.70 ಎಂ.ಎಲ್.ಡಿ ಸಾಮರ್ಥ್ಯಕ್ಕೆ ವಿನ್ಯಾಸಗೊಳಿಸಲಾಗಿದ್ದು. ಈಗಾಗಲೇ ಅಗತ್ಯವಿರುವ ನೀರನ್ನು ಪಡೆಯಲು ನೀರಾವರಿ ಇಲಾಖೆಯಿಂದ ಅನುಮತಿ ಇರುತ್ತದೆ. 'ಅಮೃತ್' ಯೋಜನೆಯಡಿ ಕೇವಲ ಪುನಶ್ಚೇತನ ಕೆಲಸಗಳನ್ನು ಮಾತ್ರ ಕೈಗೊಳ್ಳುತ್ತಿರುವುದರಿಂದ ಯೋಜನೆಗೆ ಅಗತ್ಯವಿರುವ ನೀರಿನ ಪ್ರಮಾಣವನ್ನು ಯಗಚಿ ಅಣೆಕಟ್ಟೆಯಿಂದ ಬಳಸಿಕೊಳ್ಳಲು ಹೊಸದಾಗಿ ಅನುಮತಿ ಪಡೆಯುವ ಅಗತ್ಯತೆ ಇರುವುದಿಲ್ಲ. |
| ಇ) | ಈ ಯೋಜನೆ ಯಾವಾಗ ಪೂರ್ಣಗೊಳ್ಳಬೇಕಾಗಿರುತ್ತದೆ: | ಈ ಯೋಜನೆಯನ್ನು ಗುತ್ತಿಗೆ ಕರಾರಿನ ನಿಯಮದಂತೆ 30 ತಿಂಗಳ ಕಾಲಾವಧಿಯಿದ್ದು. ದಿನಾಂಕ:24-04-2019 ರೊಳಗೆ ಪೂರ್ಣಗೊಳ್ಳಬೇಕಿರುತ್ತದೆ. |
| ಈ) | ಈ ಯೋಜನೆಯಲ್ಲಿ ಗುತ್ತಿಗೆದಾರರು ಮೈಲ್ ಸ್ಟೋನ್ ಪ್ರಕಾರ ನಿಗಧಿಪಡಿಸಿರುವ ಕೆಲಸವನ್ನು ನಿಗಧಿತ ಸಮಯದಲ್ಲಿ ಪೂರ್ಣಗೊಳಿಸದೆ ವಿಳಂಬ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸದರಿ ಯೋಜನೆಯು ಈ ಕೆಳಕಂಡ ಕಾರಣಗಳಿಂದ ವಿಳಂಬವಾಗಿರುತ್ತದೆ.<br>1) ಮೂಲಸ್ಥಾವರದಿಂದ ಮಧ್ಯಂತರ ಪಂಪುಗಾರವರೆಗಿನ ಮುಖ್ಯ ಏರು ಕೊಳವೆ ಮಾರ್ಗದಲ್ಲಿ ಅಳವಡಿಸಲು ಐದು ಕಡೆಗಳಲ್ಲಿ ಸ್ಥಳೀಯ ರೈತರಿಂದ ಪ್ರತಿರೋಧ ಇರುತ್ತದೆ. ಇದರಿಂದ ಬಾಕಿ 2.17 ಕಿ.ಮೀ ಕೊಳವೆ ಮಾರ್ಗ ಅಳವಡಿಸಲು ವಿಳಂಬವಾಗುತ್ತಿರುತ್ತದೆ. ರೈತರ ಮನವೊಲಿಸಿ ಈಗ ಕಾಮಗಾರಿಗಳನ್ನು ಪ್ರಾರಂಭಿಸಲಾಗಿದ್ದು. ಕೊಳವೆ ಮಾರ್ಗ ಅಳವಡಿಸುವ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| ಉ) | ಬಂದಿದ್ದಲ್ಲಿ. ವಿಳಂಬ ಮಾಡುತ್ತಿರುವ ಗುತ್ತಿಗೆದಾರರ ವಿರುದ್ಧ ಕೈಗೊಂಡಿರುವ ಕ್ರಮಗಳೇನು:<br>ಕಾಮಗಾರಿಯನ್ನು ಯಾವಾಗ ಪೂರ್ಣಗೊಳಿಸಲಾಗುವುದು?<br>(ವಿವರ ಒದಗಿಸುವುದು) | 2) ಮಧ್ಯಂತರ ಪಂಪು ಮನೆಯಿಂದ ಕೆ.ಹೆಚ್.ಬಿ ಬಳಿ ಇರುವ ಜಲ ಶುದ್ಧೀಕರಣ ಘಟಕದವರೆಗೆ ಹಾಲಿ ಇರುವ ಪಿ.ಎಸ್.ಸಿ ಕೊಳವೆಗಳನ್ನು ಬದಲಿಸಿ ಎಂ.ಎಸ್ ಏರು ಕೊಳವೆ ಮಾರ್ಗ ಅಳವಡಿಸಲು 3.631 ಕಿ.ಮೀ. ಉದ್ದೇಶಿಸಲಾಗಿದ್ದು. ರಾಷ್ಟ್ರೀಯ ಹೆದ್ದಾರಿಯಿಂದ ಅನುಮತಿಯನ್ನು ನಿರೀಕ್ಷಿಸಲಾಗಿದೆ.<br>3) ಜೈಲು ಆವರಣದಲ್ಲಿ ಉದ್ದೇಶಿತ 12 ಲಕ್ಷ ಲೀಟರ್ ಸಾಮರ್ಥ್ಯದ ನೆಲಮಟ್ಟದ ಜಲಸಂಗ್ರಹಗಾರವನ್ನು ನಿರ್ಮಿಸಲು ಜೈಲು ಪ್ರಾಧಿಕಾರದಿಂದ ಸ್ಥಳವನ್ನು ದಿನಾಂಕ:06-09-2018 ರಂದು ಪೌರಾಯುಕ್ತರು ನಗರಸಭೆ ಚಿಕ್ಕಮಗಳೂರು ರವರಿಗೆ ಹಸ್ತಾಂತರಿಸಿರುತ್ತಾರೆ. ಸದರಿ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.<br>4) ಆಶಾ ಕಿರಣ ಅಂಧ ಮಕ್ಕಳ ಶಾಲೆ ಆವರಣದಲ್ಲಿ ಉದ್ದೇಶಿತ 5 ಲಕ್ಷ ಲೀಟರ್ ನೆಲಮಟ್ಟದ ಜಲಸಂಗ್ರಹಗಾರವನ್ನು ನಿರ್ಮಿಸಲು ಜಿಲ್ಲಾಧಿಕಾರಿಗಳು ದಿನಾಂಕ:20-12-2017ರ ಸಭೆಯಲ್ಲಿ ಜಲಸಂಗ್ರಹಗಾರವನ್ನು ನಿರ್ಮಿಸಲು ಅನುಮತಿ ನೀಡಿರುತ್ತಾರೆ. ಸದರಿ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.<br>5) ಗುತ್ತಿಗೆದಾರರಿಂದಲೂ ಸಹ ಕಾಮಗಾರಿ ವಿಳಂಬವಾಗಿದ್ದು ತ್ವರಿತಗತಿಯಲ್ಲಿ ಕಾಮಗಾರಿಯನ್ನು ಪೂರ್ಣಗೊಳಿಸಲು ಗುತ್ತಿಗೆದಾರರಿಗೆ ನಿಯಾಮಾನುಸಾರ 19ಬಾರಿ ನೋಟಿಸ್‌ಗಳನ್ನು ನೀಡಲಾಗಿದೆ. ಮುಂದಿನ ದಿನಗಳಲ್ಲಿ ಗುತ್ತಿಗೆದಾರರು ತ್ವರಿತವಾಗಿ ಕಾಮಗಾರಿಯನ್ನು ದಿನಾಂಕ:24-04-2018 ರೊಳಗೆ ಪೂರ್ಣಗೊಳಿಸದಿದ್ದಲ್ಲಿ. ಟೆಂಡರ್ ಕರಾರಿನ ಅನ್ವಯ ಸೂಕ್ತ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ನಅಇ 438 ಸಮಸ 2018

(ಯು.ಟಿ.ಖಾದರ್)
ನಗರಾಭಿವೃದ್ಧಿ ಸಚಿವರು.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ : 842
2. ಸದಸ್ಯರ ಹೆಸರು : ಶ್ರೀ ದತ್ತಾತ್ರೇಯ ಸಿ. ಪಾಟೀಲ ರೇವೂರ (ಅಪ್ಪುಗೌಡ)
3. ಉತ್ತರಿಸಬೇಕಾದ ದಿನಾಂಕ : 12-12-2018.
4. ಉತ್ತರಿಸುವ ಸಚಿವರು : ಮಾನ್ಯ ವಸತಿ ಮತ್ತು ನಗರಾಭಿವೃದ್ಧಿ ಸಚಿವರು

| ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ನಗರಕ್ಕೆ 24/7 ಕುಡಿಯುವ ನೀರಿನ ಸರಬರಾಜು ಮಾಡುವ ಯೋಜನೆಯ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಸದರಿ ಕಾಮಗಾರಿಗೆ ಎಷ್ಟು ಅನುದಾನವನ್ನು ಮೀಸಲಿಡಲಾಗಿದೆ; | ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ನಗರ ನೀರು ಸರಬರಾಜು ಆಧುನೀಕರಣ ಯೋಜನೆ (KUWSMP) ಯಡಿ ಕಲಬುರಗಿ ನಗರಕ್ಕೆ 24/7 ನಿರಂತರ ನೀರು ಸರಬರಾಜು ವ್ಯವಸ್ಥೆ ಕಲ್ಪಿಸುವ ಯೋಜನೆಗೆ ಸರ್ಕಾರಿ ಆದೇಶ ಸಂಖ್ಯೆ: ನಅಇ 244 ಪಿಆರ್‌ಜೆ 2013, ದಿನಾಂಕ:07.11.2013 ರಂತೆ ರೂ.489.00 ಕೋಟಿಗಳನ್ನು ನಿಗಧಿಪಡಿಸಲಾಗಿದೆ. |
| ಆ) | ಸದರಿ ಕಾಮಗಾರಿಯನ್ನು ಕೈಗೊಳ್ಳಲು ಟೆಂಡರ್ ಕರೆಯಲಾಗಿದೆಯೇ; | ಸದರಿ ಯೋಜನೆಗೆ ಆಪರೇಟರ್‌ರವನ್ನು ಗೊತ್ತುಪಡಿಸಲು ಈಗಾಗಲೇ 2 ಭಾರಿ ಟೆಂಡರ್ ಕರೆಯಲಾಗಿದ್ದು, ಮೊದಲನೇ ಆಹ್ವಾನಿಸಿದ ಬಿಡ್‌ಗೆ ಒಬ್ಬರೇ ಬಿಡ್‌ದಾರರು ಭಾಗವಹಿಸಿದ್ದು, ತುಲಾನಾತ್ಮಕವಾಗಿ ಪರಿಶೀಲಿಸಿದಾಗ ಅಂದಾಜು ವೆಚ್ಚಕ್ಕಿಂತ ಹೆಚ್ಚಾಗಿ ನಮೂದಿಸಿರುವುದರಿಂದ ಸದರಿಯವರ ಬಿಡ್‌ನ್ನು ತಿರಸ್ಕರಿಸಲಾಗಿರುತ್ತದೆ ಹಾಗೂ 2ನೇ ಕರೆಯಲ್ಲಿ ಯಾವುದೇ ಬಿಡ್‌ದಾರರು ಭಾಗವಹಿಸಿರುವುದಿಲ್ಲ. |
| ಇ) | ಹಾಗಿದ್ದಲ್ಲಿ, ಸದರಿ ಕಾಮಗಾರಿಯು ಯಾವ ಹಂತದಲ್ಲಿದೆ (ಸಂಪೂರ್ಣ ಮಾಹಿತಿ ನೀಡುವುದು)? | ಸದರಿ ಗುತ್ತಿಗೆ ಮಾದರಿಯನ್ನು ಮಾರ್ಪಡಿಸಿ Design-Build-Operate-Transfer (DBOT) ಮಾದರಿಯಲ್ಲಿ ಟೆಂಡರ್ ಆಹ್ವಾನಿಸಲು ಸರ್ಕಾರವು ಆದೇಶ ಸಂಖ್ಯೆ: ನಅಇ 279 ಪಿಆರ್‌ಜೆ 2018, ದಿನಾಂಕ:22.10.2018 ರಲ್ಲಿ ಅನುಮೋದಿಸಲಾಗಿರುವಂತೆ, ಪರಿಷ್ಕೃತ ಬಿಡ್ ದಸ್ತಾವೇಜುಗಳನ್ನು ವಿಶ್ವಬ್ಯಾಂಕಿಗೆ ಸಲ್ಲಿಸಲಾಗಿದ್ದು, ಬಿಡ್ ದಸ್ತಾವೇಜುಗಳ ಪರಿಷ್ಕರಣೆ ಪ್ರಕ್ರಿಯೆ ಪ್ರಗತಿಯಲ್ಲಿದೆ. |

ನಅಇ 406 ಪಿಆರ್‌ಜೆ 2018

(ಯು.ಟಿ ಖಾದರ್)
ನಗರಾಭಿವೃದ್ಧಿ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 08

ಸದಸ್ಯರ ಹೆಸರು : ಶ್ರೀ ಕೆ.ಶಿವನಗೌಡ ನಾಯಕ್ (ದೇವದುರ್ಗ)

ಉತ್ತರಿಸುವ ದಿನಾಂಕ : 12.12.2018

ಉತ್ತರಿಸುವ ಸಚಿವರು : ಲೋಕೋಪಯೋಗಿ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ದೇವದುರ್ಗ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಲೋಕೋಪಯೋಗಿ ಇಲಾಖೆಯ ಹಲವಾರು ರಸ್ತೆಗಳು ಸಂಪೂರ್ಣ ಶಿಥಿಲಾವಸ್ಥೆಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಗಮನಕ್ಕೆ ಬಂದಿದೆ. |
| ಆ | ದೇವದುರ್ಗ-ಗೂಗಲ್ ರಸ್ತೆ, ಅರಕೇರಾ-ಶಿವಾಗಿ ರಸ್ತೆ, ಸುಂಕೆಸುರಾಳ-ಗೂಗಲ್ ರಸ್ತೆಗಳು ಸೇರಿದಂತೆ ಇತರೆ ರಸ್ತೆಗಳ ಕಾಮಗಾರಿಗಳು ಪ್ರಾರಂಭವಾಗಿ ವರ್ಷಗಳು ಕಳೆದರೂ ಇನ್ನೂ ಪೂರ್ಣಗೊಂಡಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಗಮನಕ್ಕೆ ಬಂದಿದೆ |
| ಇ | ಇಲಾಖಾ ವ್ಯಾಪ್ತಿಯಲ್ಲಿ 180 ಕೋಟಿ ರೂ.ಗಳ ಮೊತ್ತದಲ್ಲಿ ಟೆಂಡರ್ ಮೂಲಕ ತೆಗೆದುಕೊಂಡ ಕಾಮಗಾರಿಗಳನ್ನು ಸಂಪೂರ್ಣ ಮಾಡಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಗಮನಕ್ಕೆ ಬಂದಿದೆ |
| ಈ | ಅನುದಾನದ ಕೊರತೆಯಿಂದ ಪೂರ್ಣಗೊಂಡಿರದ ದೇವದುರ್ಗ-ಗೂಗಲ್, ಅರಕೇರಾ-ಶಿವಂಗಿ ಹಾಗೂ ಸುಂಕೆಸುರಾಳ-ಗೂಗಲ್ ರಸ್ತೆಗಳಿಗೆ ಯಾವಾಗ ಅನುದಾನ ಬಿಡುಗಡೆ ಮಾಡಲಾಗುವುದು, ಸದರಿ ಕಾಮಗಾರಿಗಳನ್ನು ಯಾವಾಗ ಪೂರ್ಣಗೊಳಿಸಲಾಗುವುದು (ವಿವರ ನೀಡುವುದು)? | (1)ರಾಯಚೂರು ಜಿಲ್ಲೆ ದೇವದುರ್ಗ ತಾಲೂಕಿನ ಜಾಲಹಳ್ಳಿಯಿಂದ ಅರಕೇರಾ, ಸುಂಕೇಶ್ವರಹಾಳ ಮಾರ್ಗವಾಗಿ ಗೂಗಲ್ ಕಿ.ಮೀ.0.00 ರಿಂದ 71.15 ರವರೆಗೆ ನಿರ್ಮಾಣ ಮಾಡುವ ಕಾಮಗಾರಿಗೆ 2012-13ನೇ ಸಾಲಿನ 5054-04-337-0-01-154 ಜಿಲ್ಲಾ ಮತ್ತು ಇತರೆ ರಸ್ತೆಗಳ ಯೋಜನೆಯಡಿ ರೂ.92.00 ಕೋಟಿ ಅನುದಾನವು ಮಂಜೂರಾಗಿದ್ದ ಹಿನ್ನೆಲೆಯಲ್ಲಿ, ಟೆಂಡರ್ ಆಧಾರದ ಮೇರೆಗೆ ಈ ಕಾಮಗಾರಿಯ ಗುತ್ತಿಗೆ ನಿಗಧಿಪಡಿಸಲಾಗಿದ್ದು, ಮೂಲ ಗುತ್ತಿಗೆದಾರರು ಒಟ್ಟು 71.15ಕಿ.ಮೀ. ಅಭಿವೃದ್ಧಿ ಪಡಿಸಬೇಕಾಗಿದ್ದು ಇದರಲ್ಲಿ 41.33 ಕಿ.ಮೀ. ಅನ್ನು ಪೂರ್ಣಗೊಳಿಸಿರುತ್ತಾರೆ ಹಾಗೂ ಈ ಕಾಮಗಾರಿಗೆ ರೂ.42.79 ಕೋಟಿ ವೆಚ್ಚ ಆಗಿರುತ್ತದೆ. ಸದರಿ ಕಾಮಗಾರಿಯನ್ನು ಗುತ್ತಿಗೆದಾರರು ಕಾರಣಾಂತರಗಳಿಂದ ಪೂರ್ಣಗೊಳಿಸದ ಹಿನ್ನೆಲೆಯಲ್ಲಿ ಸರ್ಕಾರದ ಪತ್ರ ಸಂಖ್ಯೆ:ಲೋಇ 178 ಸಿಐಎಸ್ 2017, ಬೆಂಗಳೂರು ದಿನಾಂಕ 18.08.2017ರನ್ವಯ ಗುತ್ತಿಗೆಯನ್ನು ಯಥಾಸ್ಥಿತಿಯಲ್ಲಿ ಮುಕ್ತಾಯಗೊಳಿಸಲಾಗಿದೆ. |

| | | |
|---|---|---|
| | | ಮುಂದುವರೆದು ಸದರಿ ರಸ್ತೆಯ ಬಾಕಿ ಉಳಿದ ಒಟ್ಟು 29.82 ಕಿ.ಮೀ ಕಾಮಗಾರಿಯನ್ನು ತೆಗೆದುಕೊಳ್ಳಲು ಅಂದಾಜು ಮೊತ್ತ ರೂ.46.91 ಕೋಟಿ ಅನುದಾನ ಬಿಡುಗಡೆ ಮಾಡಿ ಕಾಮಗಾರಿಗೆ ಟೆಂಡರ್ ಕರೆಯಲು ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ಈ), ಕಲಬುರಗಿ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ.<br><br>(2) **ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಗೂಗಲ್ ವಾಯಾ ಕೊಪ್ಪರ ಕಿ.ಮೀ. 0.00 ರಿಂದ 28.00 ರವರೆಗೆ ನಿರ್ಮಾಣ ಕಾಮಗಾರಿಗೆ** 2012-13ನೇ ಸಾಲಿನ 5054-04-337-0-01-154 ಜಿಲ್ಲಾ ಮತ್ತು ಇತರೆ ರಸ್ತೆಗಳ ಯೋಜನೆಯಡಿ ರೂ. 33.00 ಕೋಟಿ ಅನುದಾನವು ಮಂಜೂರಾಗಿದ್ದು, ಈ ಕಾಮಗಾರಿಗೆ ಟೆಂಡರ್ ಆಧಾರದ ಮೇರೆಗೆ ಗುತ್ತಿಗೆ ನಿಗಧಿಪಡಿಸಲಾಗಿದ್ದು, ಮೂಲ ಗುತ್ತಿಗೆದಾರರು ಒಟ್ಟು 28.00 ಕಿ.ಮೀ. ಅಭಿವೃದ್ಧಿಪಡಿಸಬೇಕಾಗಿದ್ದು 5.55 ಕಿ.ಮೀ. ಅನ್ನು ಪೂರ್ಣಗೊಳಿಸಿರುತ್ತಾರೆ ಹಾಗೂ ಈ ಕಾಮಗಾರಿಗೆ ರೂ.8.48 ಕೋಟಿ ವೆಚ್ಚ ಆಗಿದ್ದು, ಆದರೆ ಸದರಿ ಕಾಮಗಾರಿಯನ್ನು ಗುತ್ತಿಗೆದಾರರು ಕಾರಣಾಂತರಗಳಿಂದ ಪೂರ್ಣಗೊಳಿಸದ ಹಿನ್ನೆಲೆಯಲ್ಲಿ ಸರ್ಕಾರದ ಪತ್ರ ಸಂಖ್ಯೆ:ಲೋಇ 178 ಸಿಐಎಸ್ 2017, ಬೆಂಗಳೂರು ದಿನಾಂಕ 18.08.2017ರನ್ವಯ ಗುತ್ತಿಗೆಯನ್ನು ಯಥಾಸ್ಥಿತಿಯಲ್ಲಿ ಮುಕ್ತಾಯಗೊಳಿಸಲಾಗಿದೆ.<br><br>ಮುಂದುವರೆದು ಸದರಿ ರಸ್ತೆಯ ಬಾಕಿ ಉಳಿದ ಒಟ್ಟು 22.50 ಕಿ.ಮೀ ಕಾಮಗಾರಿ ತೆಗೆದುಕೊಳ್ಳಲು ಅಂದಾಜು ಮೊತ್ತ ರೂ. 23.63 ಕೋಟಿ ಅನುದಾನ ಬಿಡುಗಡೆ ಮಾಡಿ ಕಾಮಗಾರಿಗೆ ಟೆಂಡರ್ ಕರೆಯಲು ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ಈ), ಕಲಬುರಗಿ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ.<br><br>(3) **ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಅರಕೇರಾ ಕ್ರಾಸ್ ವಾಯಾ ಗಲಗ ನಾರಭಂಡ ವರೆಗೆ ಕಿ.ಮೀ. 0.00 ರಿಂದ 28.20 ರವರೆಗೆ ನಿರ್ಮಾಣ ಮಾಡುವ ಕಾಮಗಾರಿಗೆ** 2013-14ನೇ ಸಾಲಿನ 5054-04-337-0-01-154 ಜಿಲ್ಲಾ ಮತ್ತು ಇತರೆ ರಸ್ತೆಗಳ ಯೋಜನೆಯಡಿ ರೂ. 29.50 ಕೋಟಿ ಅನುದಾನವು ಮಂಜೂರಾಗಿದ್ದು, ಈ ಕಾಮಗಾರಿಗೆ ಟೆಂಡರ್ ಆಧಾರದ ಮೇರೆಗೆ ಗುತ್ತಿಗೆ ನಿಗಧಿಪಡಿಸಲಾಗಿದ್ದು, ಮೂಲ ಗುತ್ತಿಗೆದಾರರು ಒಟ್ಟು 28.20 ಕಿ.ಮೀ. ಅಭಿವೃದ್ಧಿ ಪಡಿಸಬೇಕಾಗಿದ್ದು, 22.63 ಕಿ.ಮೀ. ಅನ್ನು ಪೂರ್ಣಗೊಳಿಸಿರುತ್ತಾರೆ ಹಾಗೂ ಈ ಕಾಮಗಾರಿಗೆ ರೂ.18.78 ಕೋಟ್ಟಿ ವೆಚ್ಚ ಆಗಿದ್ದು, ಆದರೆ ಸದರಿ ಕಾಮಗಾರಿಯನ್ನು ಗುತ್ತಿಗೆದಾರರು ಕಾರಣಾಂತರಗಳಿಂದ ಪೂರ್ಣಗೊಳಿಸದ ಹಿನ್ನೆಲೆಯಲ್ಲಿ ಸರ್ಕಾರದ ಪತ್ರ ಸಂಖ್ಯೆ:ಲೋಇ 178 ಸಿಐಎಸ್ 2017, ಬೆಂಗಳೂರು ದಿನಾಂಕ 18.08.2017ರನ್ವಯ ಗುತ್ತಿಗೆಯನ್ನು ಯಥಾಸ್ಥಿತಿಯಲ್ಲಿ ಮುಕ್ತಾಯಗೊಳಿಸಲಾಗಿದೆ. |

| | | |
|---|---|---|
| | | ಮುಂದುವರೆದು ಸದರಿ ರಸ್ತೆಯ ಬಾಕಿ ಉಳಿದ ಒಟ್ಟು 5.57 ಕಿ.ಮೀ ಕಾಮಗಾರಿ ತೆಗೆದುಕೊಳ್ಳಲು ಅಂದಾಜು ಮೊತ್ತ ರೂ.9.33 ಕೋಟಿ ಅನುದಾನ ಬಿಡುಗಡೆ ಮಾಡಿ ಕಾಮಗಾರಿಗೆ ಟೆಂಡರ್ ಕರೆಯಲು ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ಈ), ಕಲಬುರಗಿ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ. |

**ಸಂಖ್ಯೆ:** ಲೋಇ 233 ಸಿಐಎಸ್ 2018.

**(ಹೆಚ್. ಡಿ. ರೇವಣ್ಣ)**
**ಲೋಕೋಪಯೋಗಿ ಸಚಿವರು**

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **149**

ಸದಸ್ಯರ ಹೆಸರು : ಶ್ರೀ ಸುನಿಲ್ ಬಿಳಿಯ ನಾಯಕ್ (ಭಟ್ಕಳ)

ಉತ್ತರಿಸುವ ದಿನಾಂಕ : **12.12.2018**

ಉತ್ತರಿಸುವ ಸಚಿವರು : ಮಾನ್ಯ ಲೋಕೋಪಯೋಗಿ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಾಷ್ಟ್ರೀಯ ಹೆದ್ದಾರಿ-17 ರಲ್ಲಿ ಚತುಷ್ಪಥ ರಸ್ತೆ ಕಾಮಗಾರಿ ನಡೆಸಲು ಭಟ್ಕಳ – ಹೊನ್ನಾವರ ವಿಧಾನಸಭಾ ಕ್ಷೇತ್ರದಲ್ಲಿ ಸಾರ್ವಜನಿಕರಿಂದ ವಶಪಡಿಸಿಕೊಂಡಿರುವ ಭೂಮಿ ಮತ್ತು ಮನೆಗಳಿಗೆ ಅವೈಜ್ಞಾನಿಕವಾಗಿ ಪರಿಹಾರ ನೀಡಿರುವುದರಿಂದ ಅವರುಗಳಿಗೆ ತೊಂದರೆ ಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ರಾಷ್ಟ್ರೀಯ ಹೆದ್ದಾರಿ-17 ರಲ್ಲಿ ಚತುಷ್ಪಥ ರಸ್ತೆ ಕಾಮಗಾರಿ ನಡೆಸಲು ಭಟ್ಕಳ-ಹೊನ್ನಾವರ ವಿಧಾನಸಭಾ ಕ್ಷೇತ್ರದಲ್ಲಿ ಸಾರ್ವಜನಕರಿಂದ ವಶಪಡಿಸಿಕೊಂಡಿರುವ ಭೂಮಿ ಮತ್ತು ಮನೆಗಳಿಗೆ ರಾಷ್ಟ್ರೀಯ ಹೆದ್ದಾರಿ ಕಾಯ್ದೆ 1956 ಹಾಗೂ RFCTLAAR ರ ಕಾಯ್ದೆ 2013 ರನ್ವಯ ನಿಯಮಾನುಸಾರ ಭೂ ಪರಿಹಾರ ತ್ವರಿತವಾಗಿ ನೀಡಲಾಗುತ್ತದೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ವರದಿ ಮಾಡಿರುತ್ತಾರೆ. |
| ಆ | ಬಂದಿದ್ದಲ್ಲಿ ಯೋಗ್ಯ ಪರಿಹಾರ ನೀಡಲು ಕೈಗೊಂಡಿರುವ ಕ್ರಮಗಳಾವುವು: | |
| ಇ | ಪರಿಹಾರ ನೀಡುವಾಗ ನಿರಾಶ್ರಿತರ ಮನೆ, ತೋಟ, ಕೃಷಿ ಭೂಮಿ ಎಲ್ಲವನ್ನು ಸರಿಯಾಗಿ ಪರಿಗಣಿಸಿ ಪರಿಹಾರ ನೀಡಲು ಯಾವಾಗ ಕ್ರಮ ಕೈಗೊಳ್ಳಲಾಗುವುದು (ವಿವರ ನೀಡುವುದು) ? | ಸರ್ಕಾರದಿಂದ ನೋಂದಣಿ ಹೊಂದಿರುವ ಮೌಲ್ಯ ಮಾಪಕರಿಂದ ಮೌಲ್ಯ ಮಾಪನಗೊಳಿಸಿ ಮನೆ, ಕಾಂಪೌಂಡ್ ಗೋಡೆ ಮುಂತಾದ ಕಟ್ಟಡಗಳಿಗೆ ಸಂಬಂಧಿಸಿದ ಪರಿಹಾರದ ಮೊತ್ತವನ್ನು ನೀಡಲಾಗಿರುತ್ತದೆ. ಅಯಾಯ ಗ್ರಾಮ/ ಹಳ್ಳಿಗಳಲ್ಲಿ ಅನ್ವಯವಾಗುವ ಮಾರ್ಗದರ್ಶನ ಮೌಲ್ಯಮಾಪನ (Guidance Value) ಹಾಗೂ ಈಗಾಗಲೇ ನೋಂದಾಯಿತ ಅಂಕಿ ಅಂಶಗಳ ಮತ್ತು ಮಾರ್ಗದರ್ಶನಗಳ ಕಾಯ್ದೆ ಅನುಸಾರ ಕೃಷಿ ಭೂಮಿ ಮತ್ತು ತೋಟ ಮುಂತಾದ ಭೂಮಿಗಳಿಗೆ ಪರಿಹಾರದ ಮೊತ್ತವನ್ನು ಕೇಂದ್ರ ಭೂ ಸಾರಿಗೆ ಮತ್ತು ಹೆದ್ದಾರಿ ಮಂತ್ರಾಲಯ/ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ಮತ್ತು RFCTLAAR ರ ಕಾಯ್ದೆ ಅನುಸಾರ ನೀಡಲಾಗುತ್ತದೆ |

**ಸಂಖ್ಯೆ:** ಲೋಇ 379 ಸಿಎನ್‌ಹೆಚ್ 2018.

(ಹೆಚ್. ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 881

ಸದಸ್ಯರ ಹೆಸರು : ಶ್ರೀ ರಾಜೇಶ್ ನಾಯಕ್ ಯು (ಬಂಟ್ವಾಳ)

ಉತ್ತರಿಸುವ ದಿನಾಂಕ : 12.12.2018

ಉತ್ತರಿಸುವ ಸಚಿವರು : ಲೋಕೋಪಯೋಗಿ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬಂಟ್ವಾಳ-ಮಂಗಳೂರು ತಾಲ್ಲೂಕು ಸಂಪರ್ಕದ ಮುಖ್ಯ ರಸ್ತೆಯ ಮೂಲರಪಟ್ನ ಎಂಬಲ್ಲಿ ಕುಸಿದಿರುವ ಸೇತುವೆಯ ಪುನರ್ ನಿರ್ಮಾಣಕ್ಕೆ ಸರ್ಕಾರ ಕೈಗೊಂಡ ಕ್ರಮವೇನು; | ಸದರಿ ಸೇತುವೆ ಕಾಮಗಾರಿಯನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ವತಿಯಿಂದ ತೆಗೆದುಕೊಳ್ಳಲು ಪರಿಶೀಲಿಸಲಾಗುತ್ತಿದೆ. |
| ಆ) | ಈ ಬಗ್ಗೆ ಇಲಾಖೆ ಪರಿಶೀಲನೆ ನಡೆಸಿದೆಯೇ; | |
| ಇ) | ಪುನರ್ ನಿರ್ಮಾಣಕ್ಕೆ ತಗಲುವ ವೆಚ್ಚ ಮತ್ತು ಅಂದಾಜು ಪಟ್ಟಿ ತಯಾರಿಸಲಾಗಿದೆಯೇ; | |
| ಈ) | ವಾಹನ ಸಂಚಾರಕ್ಕೆ ತಾತ್ಕಾಲಿಕ ವ್ಯವಸ್ಥೆ ಕಲ್ಪಿಸಲಾಗುವುದೇ? | ಈ ಸೇತುವೆಯ ಮೇಲ್ಭಾಗದಲ್ಲಿ ಸುಮಾರು 300ಮೀ ದೂರದಲ್ಲಿ ಒಂದು ತೂಗು ಸೇತುವೆ ಇದ್ದು ಸೇತುವೆಯನ್ನು ಪಾದಚಾರಿಗಳು ಮಾತ್ರ ಉಪಯೋಗಿಸಬಹುದಾಗಿರುತ್ತದೆ.<br>ಈ ತೂಗು ಸೇತುವೆವರೆಗಿನ ಇಕ್ಕೆಲಗಳ ಕೂಡು ರಸ್ತೆಯನ್ನು ವಾಹನ ಸಂಚಾರಕ್ಕಾಗಿ ಬದಲಿ ರಸ್ತೆಯಾಗಿ ಸಾರ್ವಜನಿಕರಿಗೆ ಉಪಯೋಗಿಸಲು ಅನುವಾಗುವಂತೆ ಒಟ್ಟು 830 ಮೀ ಉದ್ದಕ್ಕೆ ಫಾರ್ಮೇಶನ್, ಮೋರಿಗಳ ನಿರ್ಮಾಣ ಹಾಗೂ ಜಲ್ಲಿ ಮೇಲ್ಮೈನ ತಾತ್ಕಾಲಿಕ ರಸ್ತೆ ನಿರ್ಮಿಸಲಾಗಿರುತ್ತದೆ. |

**ಸಂಖ್ಯೆ:** ಲೋಇ 175 ಸಿಜಿಆರ್ 2018.

(ಹೆಚ್. ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖೆ : **858**

ಸದಸ್ಯರ ಹೆಸರು : ಶ್ರೀ ರಾಘವೇಂದ್ರ ಬಸವರಾಜ ಹಿಟ್ನಾಳ ಕೆ

ಉತ್ತರಿಸುವ ದಿನಾಂಕ : **12.12.2018**

ಉತ್ತರಿಸುವ ಸಚಿವರು : ಲೋಕೋಪಯೋಗಿ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | 2015-16ನೇ ಸಾಲಿನಿಂದ ಇಲ್ಲಿಯವರೆಗೆ ಕೊಪ್ಪಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಎಷ್ಟು ಕಿ.ಮೀ. ರಸ್ತೆಯನ್ನು ಅಭಿವೃದ್ಧಿಪಡಿಸಲಾಗಿದೆ. (ವಿವರ ನೀಡುವುದು) | 2015-16ನೇ ಸಾಲಿನಿಂದ ಇಲ್ಲಿಯವರೆಗೆ ಕೊಪ್ಪಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಒಟ್ಟು **170.58** ಕಿ.ಮೀ ರಸ್ತೆಯನ್ನು ಅಭಿವೃದ್ಧಿಪಡಿಸಲಾಗಿದೆ. ವರ್ಷ ಮತ್ತು ಕಿ.ಮೀ. ವಿವರಗಳು ಈ ಕೆಳಕಂಡಂತಿವೆ: |

| ಕ್ರ ಸಂ | ವರ್ಷ | ಒಟ್ಟು ಅಭಿವೃದ್ಧಿ ಪಡಿಸಿರುವ ರಸ್ತೆ ಉದ್ದ ಕಿ.ಮೀ' |
|---|---|---|
| 1 | 2015-16 | 80.63 |
| 2 | 2016-17 | 24.51 |
| 3 | 2017-18 | 56.08 |
| 4 | 2018-19 | 9.36 |
| | **ಒಟ್ಟು** | **170.58** |

| | | |
|---|---|---|
| ಆ) | ಸದರಿ ರಸ್ತೆಗಳ ಅಭಿವೃದ್ಧಿಗಾಗಿ ಮಾಡಿರುವ ವೆಚ್ಚವೆಷ್ಟು; (ವಿವರ ನೀಡುವುದು) | 2015–16ನೇ ಸಾಲಿನಿಂದ ಇಲ್ಲಿಯವರೆಗೆ ಕೊಪ್ಪಳ ವಿಧಾನಸಭಾ ಕ್ಷೇತ್ರದ ರಸ್ತೆಗಳ ಅಭಿವೃದ್ಧಿಗಾಗಿ ವೆಚ್ಚ ಮಾಡಿರುವ ಅನುದಾನದ ವಿವರ ಈ ಕೆಳಕಂಡಂತಿವೆ:<br>(ವೆಚ್ಚ ಲಕ್ಷ ರೂ.ಗಳಲ್ಲಿ)<br>**2015–16ನೇ ಸಾಲಿನಿಂದ ಇಲ್ಲಿಯವರೆಗೆ ಅಭಿವೃದ್ಧಿಪಡಿಸಿರುವ ರಸ್ತೆಗಳ ಮತ್ತು ವೆಚ್ಚದ ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ.** |

| ಕ್ರ. ಸಂ | ವರ್ಷ | ಒಟ್ಟು ಅಭಿವೃದ್ಧಿ ಪಡಿಸಿರುವ ವೆಚ್ಚ |
|---|---|---|
| 1 | 2015–16 | 4085.27 |
| 2 | 2016–17 | 1612.54 |
| 3 | 2017–18 | 2451.05 |
| 4 | 2018–19 | 122.47 |
| | **ಒಟ್ಟು** | **8271.33** |

| | | |
|---|---|---|
| ಇ) | ಕೊಪ್ಪಳ ವಿಧಾನಸಭಾ ಕ್ಷೇತ್ರದ ರಸ್ತೆಗಳು ದುರಸ್ತಿಗೊಂಡಿರುವುದರಿಂದ ಸಂಚಾರಕ್ಕೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | **ಮೇಲಿನ ವಿವರದಂತೆ ಹಾಗೂ ವಾರ್ಷಿಕ ನಿರ್ವಹಣೆ ಕೈಗೊಂಡು ರಸ್ತೆಗಳನ್ನು ವಾಹನ ಸಂಚಾರಕ್ಕೆ ಅನುವು ಮಾಡಲಾಗಿದೆ.** |
| ಈ) | ಹಾಗಿದ್ದಲ್ಲಿ, ಸದರಿ ರಸ್ತೆಗಳ ಅಭಿವೃದ್ಧಿಗೆ ತೆಗೆದುಕೊಂಡಿರುವ ಕ್ರಮಗಳೇನು? (ವಿವರ ನೀಡುವುದು) | **2018–19ನೇ ಸಾಲಿಗೆ ಕೊಪ್ಪಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ರಾಜ್ಯ ಹೆದ್ದಾರಿ ಹಾಗೂ ಜಿಲ್ಲಾ ಮುಖ್ಯ ರಸ್ತೆಗಳ ನಿರ್ವಹಣೆಗಾಗಿ ಟೆಂಡರ್ ಕರೆಯಲಾಗಿದ್ದು, ಶೀಘ್ರವಾಗಿ ಸದರಿ ರಸ್ತೆಗಳ ದುರಸ್ತಿಯನ್ನು ಕೈಗೊಳ್ಳಲಾಗುವುದು.** |

| ಕ್ರ. ಸಂ | ತಾಲೂಕು | ರಾಜ್ಯ ಹೆದ್ದಾರಿ | | ಜಿಲ್ಲಾ ಮುಖ್ಯ ರಸ್ತೆ | |
|---|---|---|---|---|---|
| | | ಕಾಮಗಾರಿಗಳ ಸಂಖ್ಯೆ | ಅನುದಾನ (ರೂ. ಲಕ್ಷಗಳಲ್ಲಿ) | ಕಾಮಗಾರಿಗಳ ಸಂಖ್ಯೆ | ಅನುದಾನ (ರೂ. ಲಕ್ಷಗಳಲ್ಲಿ) |
| 1 | ಕೊಪ್ಪಳ | 3 | 111.00 | 6.00 | 138.00 |

**ಸಂಖ್ಯೆ:** ಲೋಇ 232 ಸಿಐಎಸ್ 2018.

(ಹೆಚ್. ಡಿ. ರೇವಣ್ಣ)
**ಲೋಕೋಪಯೋಗಿ ಸಚಿವರು**

